# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಮಾರ್ಚ್ ೬, ೨೦೧೪ (ಫಾಲ್ಗುಣ ೧೫, ಶಕ ವರ್ಷ ೧೯೩೫)<br>Bangalore, Thursday, March 6, 2014 (Phalguna 15, Shaka Varsha 1935) | ಸಂಚಿಕೆ ೧೦<br>Issue 10 |
|---|---|---|


## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಕಾರ್ಯನಿರ್ವಾಹಕ ಇಂಜಿನೀಯರ, ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗ ಕಚೇರಿ ಶಿರಸಿ.**

**ಕಾರ್ಯನಿರ್ವಾಹಕ ಇಂಜಿನೀಯರು,ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗ ಕಾರ್ಯಾಲಯದ**

**ಪ್ರಕಟಣೆ.**

**ಕ್ರ.ಸಂ:–ಕಾನಿಇಂ/ಪಂರಾಇಂ/ವಿಶಿ/ಸಿ–1/ಮಾಹಅ/2013–14/2969/ದಿನಾಂಕ: 22/11/2013.**

2005 ರ ಮಾಹಿತಿ ಹಕ್ಕು ಅಧಿನಿಯಮ (2005 ರ ಕೇಂದ್ರ ಕಾಯಿದೆ 22) ರ ಅಡಿಯಲ್ಲಿ ಕಾರ್ಯನಿರ್ವಾಹಕ ಇಂಜಿನೀಯರರು ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗ ಶಿರಸಿ ಕಚೇರಿಯನ್ನು ಸಾರ್ವಜನಿಕ ಪ್ರಾಧಿಕಾರವೆಂದು ಪರಿಗಣಿಸಿ ಸರ್ಕಾರಿ ಆದೇಶ ಸಂಖ್ಯೆ:– ಗ್ರಾ.ಅಪ/324/ಕೆಎಸ್ಎಎಸ್/2005 ದಿನಾಂಕ:– 23–9–2005 ರ ಪ್ರಕಾರ ಹಾಗೂ ಸದರಿ ಅಧಿನಿಯಮದ 5 (1) ಹಾಗೂ ಸೆಕ್ಷನ್–19 (1) ಪ್ರಕಾರ ಈ ಕೆಳಗಿನವರನ್ನು ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಮೇಲ್ಮನವಿ ಪ್ರಾಧಿಕಾರವೆಂದು ಗುರುತಿಸಿ ಆದೇಶಿಸಲಾಗಿದೆ.

| ಅ.ನಂ | ಕಚೇರಿ & ಪೂರ್ಣ ವಿಳಾಸ | ಸಾರ್ವಜನಿಕರ ಮಾಹಿತಿ ಅಧಿಕಾರಿ ಸೆಕ್ಷನ್–5 (1) | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್–5 (2) | ಮೇಲ್ಮನವಿ ಪ್ರಾಧಿಕಾರ ಸೆಕ್ಷನ್–19 (1) |
|---|---|---|---|---|
| 1 | ಕಾರ್ಯನಿರ್ವಾಹಕ ಇಂಜಿನೀಯರ,ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗ ಶಿರಸಿ (ಉ.ಕ) | ಲೆಕ್ಕ ಪರಿಶೋಧನಾಧಿಕಾರಿ. ಪಂ.ರಾ.ಇಂ, ವಿಭಾಗ, ಶಿರಸಿ. | ದ್ವಿತೀಯ ದರ್ಜೆ ಸಹಾಯಕರು. ಪಂ.ರಾ.ಇಂ, ವಿಭಾಗ, ಶಿರಸಿ. | ಕಾರ್ಯನಿರ್ವಾಹಕ ಇಂಜಿನೀಯರರು ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗ ಶಿರಸಿ (ಉ.ಕ) |

**ಕೈಪಿಡಿ–1:–** ಸಂಸ್ಥೆಯ ವಿವರಗಳು ಮತ್ತು ಕರ್ತವ್ಯಗಳು ಮತ್ತು ವಿಧಿಗಳು.

ಕರ್ನಾಟಕ ರಾಜ್ಯದ ಉತ್ತರಕನ್ನಡ ಜಿಲ್ಲೆಯ ಘಟ್ಟದ ಮೇಲಿನ ತಾಲೂಕುಗಳಾದ ಶಿರಸಿ, ಸಿದ್ದಾಪುರ, ಯಲ್ಲಾಪುರ, ಮುಂಡಗೋಡ ಹಳಿಯಾಳ ಜೋಯಿಡಾ ಒಟ್ಟೂ 6 ತಾಲೂಕುಗಳ ಕಾರ್ಯವ್ಯಾಪ್ತಿಯನ್ನು ಹೊಂದಿರುವ ಈ ವಿಭಾಗವು ಉತ್ತರ ಕನ್ನಡ ಜಿಲ್ಲಾ ಪಂಚಾಯತ್ ಅಧೀನದಲ್ಲಿ ಕಾರ್ಯನಿವಹಿಸುತ್ತಿದ್ದು ಮೇಲ್ಕಂಡ ತಾಲೂಕುಗಳ ವ್ಯಾಪ್ತಿಗೊಳಪಟ್ಟ ಜಿಲ್ಲಾ ಪಂಚಾಯತ್ ವ್ಯಾಪ್ತಿಯಲ್ಲಿ ಬರುವ ರಸ್ತೆಗಳು, ಸೇತುವೆಗಳು, ಕುಡಿಯುವ ನೀರಿನ ವ್ಯವಸ್ಥೆ ಕಿರು ನೀರು ಸರಬರಾಜು ಯೋಜನೆಗಳು ಸರ್ಕಾರದ ವ್ಯಾಪ್ತಿಯಲ್ಲಿ ಬರುವ ವಿವಿಧ ಇಲಾಖೆಗಳ ಕಟ್ಟಡ ನಿರ್ಮಾಣ ಹಾಗೂ ನಿರ್ವಹಣೆ ಇತ್ಯಾದಿ ಕೆಲಸಗಳ ವ್ಯವಸ್ಥೆಗಾಗಿ ಈ ವಿಭಾಗವನ್ನು ಜುಲೈ–1987 ರಿಂದ ಅಸ್ತಿತ್ವಕ್ಕೆ ತರಲಾಗಿದೆ.ಈ ಕಾರ್ಯಾಲಯವು ಮುಖ್ಯ ಇಂಜಿನೀಯರ, ಪಂಚಾಯತ್ ರಾಜ್ ಇಂಜಿನೀಯರಿಂಗ್ ಇಲಾಖೆ ಬೆಂಗಳೂರು ಹಾಗೂ ಅಧೀಕ್ಷಕ ಇಂಜಿನೀಯರ, ಪಂಚಾಯತ್ ರಾಜ್ ಇಂಜಿನೀಯರಿಂಗ್ ವೃತ್ತ ಧಾರವಾಡ ರವರ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿದೆ. ಹಾಗೂ ಉತ್ತರ ಕನ್ನಡ ಜಿಲ್ಲಾ ಪಂಚಾಯತ್ ಕಾರವಾರ ರವರ ನಿರ್ದೇಶನದಂತೆ ಕಾಮಗಾರಿಗಳನ್ನು ನಿರ್ವಹಿಸುವುದು. 2012–13 ನೇ ಸಾಲಿನಲ್ಲಿ ಈ ವಿಭಾಗದ ಅಧೀನದಲ್ಲಿ ಕಾರ್ಯನಿರ್ವಹಿಸಿದ ಕಾಮಗಾರಿಗಳು ಈ ಕೆಳಗಿನಂತಿವೆ.

**(ಅ) ರಸ್ತೆಗಳು,**

1) ಗ್ರಾಮೀಣ ರಸ್ತೆಗಳು.

**(ಬ) ಸೇತುವೆಗಳು.**

1) ಸಣ್ಣ ಸೇತುವೆಗಳು.

2) ಅಡ್ಡ ಮೋರಿಗಳು.

**(ಕ) ಕಟ್ಟಡಗಳು.**

1) ಮುಖ್ಯ ಕಟ್ಟಡಗಳು.

2) ಸಣ್ಣ ಕಟ್ಟಡಗಳು..

**(ಡ) ಕುಡಿಯುವ ನೀರು.**

1) ನೀರು ಸರಬರಾಜು ಯೋಜನೆಗಳು.

2) ಕಿರು ನೀರು ಸರಬರಾಜು ಯೋಜನೆಗಳು.

3) ಕೈಪಂಪು ಕೊಳವೆ ಬಾವಿಗಳು

ಈ ವಿಭಾಗಗಳ ಅಧೀನದಲ್ಲಿ ಬರುವ 6 ತಾಲೂಕುಗಳನ್ನು 6 ಉಪ–ವಿಭಾಗಗಳನ್ನಾಗಿ ವಿಂಗಡಿಸಿ ಅವುಗಳ ಈ ವಿಭಾಗದ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿವೆ.

ಕಾರ್ಯನಿರ್ವಾಹಕ ಇಂಜಿನೀಯರವರು ಈ ವಿಭಾಗದ ಮುಖ್ಯಸ್ಥರಾಗಿರುತ್ತಾರೆ. ಇವರ ಅಧೀನದಲ್ಲಿ ಒಟ್ಟೂ 4 ಶಾಖೆಗಳು ಕಾರ್ಯನಿರ್ವಹಿಸುತ್ತಿವೆ.

1) ಆಡಳಿತ ಶಾಖೆ

2) ತಾಂತ್ರಿಕ ಶಾಖೆ

3) ಲೆಕ್ಕ ಪತ್ರ ಶಾಖೆ

4) ಉಗ್ರಾಣ ಶಾಖೆ.

**ಕೈಪಿಡಿ–2:–** ಸಂಸ್ಥೆಯ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದ ಅಧಿಕಾರ ಮತ್ತು ವಿಧಿಗಳ ವಿವರ.

ಕಾರ್ಯನಿರ್ವಾಹಕ ಇಂಜಿನೀಯರರ ಅಧೀನದಲ್ಲಿ ಈ ಕೆಳಗಿನ ಶಾಖೆಗಳು ಕಾರ್ಯನಿರ್ವಹಿಸುತ್ತಿವೆ.

1) **ಆಡಳಿತ ಶಾಖೆ;–** ಈ ಶಾಖೆಯಲ್ಲಿ ಒಬ್ಬ ಅಧೀಕ್ಷಕರು, 2 ಜನ ದ್ವಿತೀಯ ದರ್ಜೆ ಸಹಾಯಕರು, ಒಬ್ಬ ಪ್ರಥಮ ದರ್ಜೆ ಸಹಾಯಕರು, ಒಬ್ಬ ಶೀಘ್ರಲಿಪಿಗಾರರು, ಇಬ್ಬರು ಬೆರಳಚ್ಚುಗಾರರು, 4 ಜನ ಜವಾನರು, ಕಾರ್ಯನಿರ್ವಹಿಸುತ್ತಾರೆ.

ಅಧೀಕ್ಷಕರು ಶಾಖಾ ಮುಖ್ಯಸ್ಥರಾಗಿದ್ದು ಶಾಖೆಯ ಸಿಬ್ಬಂದಿಗಳಿಗೆ ಮಾರ್ಗದರ್ಶಕರಾಗಿದ್ದು ಶಾಖೆಯ ಮೇಲುಸ್ತುವಾರಿಯನ್ನು ನಿರ್ವಹಿಸುತ್ತಾರೆ, ಹಾಗೂ ವಿಭಾಗ ಕಾರ್ಯಾಲಯದ ಸಿಬ್ಬಂದಿ ವ್ಯವಹಾರಕ್ಕೆ ಸಂಬಂಧ ಪಟ್ಟ ಯಾವತ್ತೂ ಕಡತಗಳ ಪರಿಶೀಲನೆ ನಿಯಮಾವಳಿಗಳ ಉಲ್ಲೇಖಿಸುವಿಕೆ ಇತ್ಯಾದಿ ಕೆಲಸಗಳನ್ನು ನಿರ್ವಹಿಸುವರು. ಪ್ರಥಮ ದರ್ಜೆ ಸಹಾಯಕರ–1 ಹುದ್ದೆ, ಶೀಘ್ರಲಿಪಿಗಾರರ ಹುದ್ದೆ–1 ಜವಾನ ಹುದ್ದೆಗಳು–2 ಖಾಲಿ ಇರುತ್ತವೆ. **ಪ್ರಥಮ ದರ್ಜೆ ಸಹಾಯಕ** ಹುದ್ದೆಯ ಕರ್ತವ್ಯಗಳನ್ನು ಎಂ.ಟಿ.ನಾಯ್ಕ, ದ್ವಿತೀಯ ದರ್ಜೆ ಸಹಾಯಕ ರವರು ಹೆಚ್ಚುವರಿಯಾಗಿ ನಿರ್ವಹಿಸುವರು. ಇವರು ಸಿಬ್ಬಂದಿ ಶಾಖೆಗೆ ಸಂಬಂಧಿಸಿದ ವಿಭಾಗ/ಉಪ ವಿಭಾಗದ ಯಾವತ್ತೂ ಪತ್ರ ವ್ಯವಹಾರ, ಉಪ ವಿಭಾಗದ ಪ್ರಯಾಣ ಭತ್ಯೆ ಬಿಲ್ಲುಗಳ ಪರಿಶೀಲನೆ ವಿಭಾಗ ಕಛೇರಿ ಸಿಬ್ಬಂದಿಗಳ ಸೇವಾ ಪುಸ್ತಕ ನಿರ್ವಹಣೆ, ಮಾಸಿಕ, ತ್ರೈಮಾಸಿಕ, ಅರ್ಧವಾರ್ಷಿಕ, ನಿಯತ ಕಾಲಿಕೆಗಳನ್ನು ಮೇಲಾಧಿಕಾರಿಗಳಿಗೆ ಸಲ್ಲಿಸುವದು. ನಾಲ್ಕನೇ ದರ್ಜೆ ಗುತ್ತಿಗೆ ನೊಂದಣಿ, ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿಯಾಗಿ ಕೆಲಸ ನಿರ್ವಹಿಸುತ್ತಿದ್ದಾರೆ.

**ಒಬ್ಬ ದ್ವಿತೀಯ ದರ್ಜೆ ಸಹಾಯಕರು** ವೇತನ ಬಿಲ್ಲು, ಕಚೇರಿ ವೆಚ್ಚದ ಸಾದಿಲ್ವಾರು ಬಿಲ್ಲು, ವಾರ್ಷಿಕ ಸಿಬ್ಬಂದಿ ವೇತನಕ್ಕೆ ಹಾಗೂ ಸಾದಿಲ್ವಾರು ವೆಚ್ಚಕ್ಕೆ ಬೇಕಾಗುವ ಅಂದಾಜು ಪತ್ರಿಕೆ ತಯಾರಿಸುವದು, ಉಪ–ವಿಭಾಗಗಳಿಗೆ ಅನುದಾನ ಹಂಚಿಕೆ, ಪತ್ರ ವ್ಯವಹಾರ ಮಾಸಿಕ ವರದಿಗಳನ್ನು ಮೇಲಾಧಿಕಾರಿಗಳಿಗೆ ಸಲ್ಲಿಸುವದು, ಉಪ ವಿಭಾಗದ ಪ್ರಯಾಣ ಭತ್ಯೆ ಬಿಲ್ಲುಗಳ ಪರಿಶೀಲನೆ, HRMS ಕೆಲಸ ನಿರ್ವಹಿಸುವುದು.

**ಒಬ್ಬ ಬೆರಳಚ್ಚುಗಾರ ಸಿಬ್ಬಂದಿ** ವಿಭಾಗ ಕಾರ್ಯಾಲಯದ ಸಿಬ್ಬಂದಿಯವರ ಪ್ರಯಾಣ ಭತ್ಯೆ ಬಿಲ್ಲುಗಳನ್ನು ತಯಾರಿಸುವುದು, ಮತ್ತು ಮೇಲು ರುಜುವಿಗಾಗಿ ಮೇಲಾಧಿಕಾರಿಗಳಿಗೆ ಸಲ್ಲಿಸುವುದು. ಕಛೇರಿ ಸಿಬ್ಬಂದಿಗಳ ಸಾಂದರ್ಭಿಕ ರಜಾ ವಹಿ ನಿರ್ವಹಿಸುವುದು ಸಾರ್ವಜನಿಕ ಕುಂದು ಕೊರತೆ ಅರ್ಜಿಗಳ ವಿಲೇವಾರಿ ಹಾಗೂ ವಿಭಾಗ ಕಾರ್ಯಾಲಯದ HRMS ಕೆಲಸ ನಿರ್ವಹಿಸುವುದು ದೈನಂದಿನ ಕಛೇರಿಯ ಪತ್ರಗಳನ್ನು ಗಣಕೀಕರಣ ಕೆಲಸ ಮಾಡುವುದು, ಜಾವಕ (Outward) ಕೆಲಸ ಇತ್ಯಾದಿ

**ಒಬ್ಬ ಬೆರಳಚ್ಚುಗಾರರು** ದೈನಂದಿನ ಕಛೇರಿಯ ಪತ್ರಗಳನ್ನು ಗಣಕೀಕರಣ ಮಾಡುತ್ತಿದ್ದಾರೆ. ಆವಕ (Inward) ಕೆಲಸದ ಜೊತೆಗೆ ಕಚೇರಿಗೆ ಬರುವ ದೂರವಾಣಿ ಸ್ವೀಕರಿಸುವುದು ಹಾಗೂ ರವಾನಿಸುವ ಕೆಲಸವನ್ನು ನಿರ್ವಹಿಸುತ್ತಿದ್ದಾರೆ.

**ತಾಂತ್ರಿಕ ಶಾಖೆ :–**_ಈ ಶಾಖೆಯಲ್ಲಿ 2 ಸಹಾಯಕ ಇಂಜಿನೀಯರ 5 ಕಿರಿಯ ಇಂಜಿನೀಯರ ಹುದ್ದೆ ಹಾಗೂ 2 ಆಕೃತಿ ರಚನಾಕಾರರ ಹುದ್ದೆ, 5 ಮೈಕಾನಿಕ ಹುದ್ದೆ, 1 ಪಂಪ ಮೈಕಾನಿಕ ಹುದ್ದೆ, 1 ಸಂಖ್ಯಾ ನಿರೀಕ್ಷಕರ ಹುದ್ದೆ ಮಂಜೂರಾಗಿರುತ್ತವೆ. ಅವುಗಳಲ್ಲಿ 2 ಸಹಾಯಕ ಇಂಜಿನೀಯರ್, 1 ಕಿರಿಯ ಇಂಜಿನೀಯರ ಹುದ್ದೆ, 1 ಸಂಖ್ಯಾನಿರೀಕ್ಷಕರ ಹುದ್ದೆ, 2 ಆಕೃತಿ ರಚನಾಕಾರರ ಹುದ್ದೆಗಳು ಖಾಲಿ ಇರುತ್ತವೆ ಹಾಗೂ 4 ಜನ ಕಿರಿಯ ಇಂಜಿನೀಯರರು ಮಾತ್ರ ಈ ಶಾಖೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಅವರು ನಿರ್ವಹಿಸುವ ಕಾರ್ಯಗಳು ಈ ಕೆಳಗಿನಂತಿವೆ.

**ಒಬ್ಬ ಕಿರಿಯ ಇಂಜಿನೀಯರ** – ಎಲ್ಲಾ 6 ಉಪವಿಭಾಗದಲ್ಲಿ ಬರುವ NRDWP, ಅಂತರ್ಜಲ. ಟಾಸ್ಕಫೋರ್ಸ, ಸೆಸ್ಟನಬಿಲಿಟಿ, ಹಾಗೂ ಇತರೆ ಕುಡಿಯುವ ನೀರಿನ ಕಾಮಗಾರಿಗಳ ಕ್ರಿಯಾಯೋಜನೆ ತಯಾರಿಸುವುದು ಅಂದಾಜು ಪತ್ರಿಕೆ ತಾಂತ್ರಿಕ ಪರಿಶೀಲನೆ ಮಾಡುವುದು, ತುಂಡುಗುತ್ತಿಗೆ ಕರಾರು ಪತ್ರ ಮಂಜೂರು ಮಾಡುವುದು ಹಾಗೂ ಉಪ–ವಿಭಾಗದಿಂದ ಬರುವ ಕಾಮಗಾರಿಬಿಲ್ಲುಗಳ ತಪಾಸಣೆ ಹಾಗೂ ಇವುಗಳಿಗೆ ಸಂಬಂಧಪಟ್ಟ ವಹಿಗಳು, ಕಡತಗಳು ಕೆ.ಡಿ.ಪಿ ಸಭೆ ಹಾಗೂ ಪತ್ರ ವ್ಯವಹಾರಗಳ ನಿರ್ವಹಣೆ ಮಾಡುವುದು ಹಾಗೂ ಸಭೆಗಳಿಗೆ ಬೇಕಾಗುವ ನಿಮ್ಮ ಶಾಖೆಗೆ ಸಂಬಂಧಿಸಿದ ಸಭೆ ಮಾಹಿತಿಯನ್ನು ತಯಾರಿಸಿ ಕೊಡುವುದು.

**ಒಬ್ಬ ಕಿರಿಯ ಇಂಜನೀಯರ –** ಎಲ್ಲಾ 6 ಉಪವಿಭಾಗದಲ್ಲಿ ಬರುವ 3054 ರಸ್ತೆ ಮತ್ತು ಸೇತುವೆ, 5054 ರಸ್ತೆ ಮತ್ತು ಸೇತುವೆ ಕಾಮಗಾರಿ, 13ನೇ ಹಣಕಾಸು ರಸ್ತೆ ಕಾಮಗಾರಿ ಹಾಗೂ ಲೋಕಸಭಾ ಸದಸ್ಯರ ಕಾಮಗಾರಿಗಳ ಕ್ರಿಯಾಯೋಜನೆ ತಯಾರಿಸುವುದು ಅಂದಾಜು ಪತ್ರಿಕೆ ತಾಂತ್ರಿಕ ಪರಿಶೀಲನೆ ಮಾಡುವುದು, ತುಂಡುಗುತ್ತಿಗೆ ಕರಾರು ಪತ್ರ ಮಂಜೂರು ಮಾಡುವುದು ಹಾಗೂ ಉಪ–ವಿಭಾಗದಿಂದ ಬರುವ ಕಾಮಗಾರಿ ಬಿಲ್ಲುಗಳ ತಪಾಸಣೆ ಹಾಗೂ ಇವುಗಳಿಗೆ ಸಂಬಂಧಪಟ್ಟ ವಹಿಗಳು, ಕಡತಗಳು ಹಾಗೂ ಪತ್ರ ವ್ಯವಹಾರಗಳ ನಿರ್ವಹಣೆ ಮಾಡುವುದು ಹಾಗೂ ಸಭೆಗಳಿಗೆ ಬೇಕಾಗುವ ನಿಮ್ಮ ಶಾಖೆಯ ಮಾಹಿತಿಯನ್ನು ತಯಾರಿಸಿ ಕೊಡುವುದು.

**ಒಬ್ಬ ಕಿರಿಯ ಇಂಜನೀಯರ –** ಎಲ್ಲಾ 6 ಉಪವಿಭಾಗದಲ್ಲಿ ಬರುವ ವಿಧಾನಸಭಾ ಸದಸ್ಯರ ಅನುದಾನ(MLA),ವಿಧಾನ ಪರಿಷತ್ ಸದಸ್ಯರ ಅನುದಾನ (MLC) ಯೋಜನೆ SGSY ಕಾಮಗಾರಿಗಳ ಕ್ರಿಯಾಯೋಜನೆ ತಯಾರಿಸುವುದು ಅಂದಾಜು ಪತ್ರಿಕೆ ತಾಂತ್ರಿಕ ಪರಿಶೀಲನೆ ಮಾಡುವುದು, ತುಂಡುಗುತ್ತಿಗೆ ಕರಾರು ಪತ್ರ ಮಂಜೂರು ಮಾಡುವುದು ಹಾಗೂ ಉಪ– ವಿಭಾಗದಿಂದ ಬರುವ ಕಾಮಗಾರಿ ಬಿಲ್ಲುಗಳ ತಪಾಸಣೆ ಹಾಗೂ ಇವುಗಳಿಗೆ ಸಂಬಂಧಪಟ್ಟ ವಹಿಗಳು,ಕಡತಗಳು ಹಾಗೂ ಜಿಲ್ಲಾ ಪತ್ರ ವ್ಯವಹಾರಗಳ ನಿರ್ವಹಣೆ ಮಾಡುವುದು ಮಲೆನಾಡು ಅಭಿವೃದ್ಧಿ, ಜಿಲ್ಲಾ Innovative ಅನುದಾನ ಜಿಲ್ಲಾ ಪಂಚಾಯತ ಸಾಮಾನ್ಯ ಸಭೆ ಬೇಕಾಗುವ ತಮ್ಮ ಶಾಖೆಯ ಮಾಹಿತಿಯನ್ನು ತಯಾರಿಸಿ ಕೊಡುವುದು.

**ಮತ್ತೊಬ್ಬ ಕಿರಿಯ ಇಂಜನೀಯರ,** ಎಲ್ಲಾ 6 ಉಪವಿಭಾಗದಲ್ಲಿ ಬರುವ , ಚಿಕ್ಕನೀರಾವರಿ, ಅತೀವೃಷ್ಠಿ, ಹಾಗೂ ಸುವರ್ಣಗ್ರಾಮ ಯೋಜನೆ ನಬಾರ್ಡ ಅಂಗನವಾಡಿ ಕಟ್ಟಡ ಕಾಮಗಾರಿಗಳ ಕ್ರಿಯಾಯೋಜನೆ ತಯಾರಿಸುವುದು ಅಂದಾಜು ಪತ್ರಿಕೆ ತಾಂತ್ರಿಕ ಪರಿಶೀಲನೆ ಮಾಡುವುದು, ತುಂಡುಗುತ್ತಿಗೆ ಕರಾರು ಪತ್ರ ಮಂಜೂರು ಮಾಡುವುದು ಹಾಗೂ ಉಪ–ವಿಭಾಗದಿಂದ ಬರುವ ಕಾಮಗಾರಿ ಬಿಲ್ಲುಗಳ ತಪಾಸಣೆ ಹಾಗೂ ಇವುಗಳಿಗೆ ಸಂಬಂಧಪಟ್ಟ ವಹಿಗಳು, ಕಡತಗಳು ಹಾಗೂ ಪತ್ರ ವ್ಯವಹಾರಗಳ ನಿರ್ವಹಣೆ ಮಾಡುವುದು ಹಾಗೂ ಗ್ರಾ.ಪಂ.,ತಾ.ಪಂ., ಇಲಾಖೆಗಳಿಗೆ ಸಂಬಂಧಿಸಿದ ಅಂದಾಜು ಪತ್ರಿಕೆಗಳ ತಾಂತ್ರಿಕ ಪರಿಶೀಲನೆ ಮಾಡುವುದು ಪ್ರವಾಸೋದ್ಯಮ ಹಾಗೂ ಇತರೆ ಇಲಾಖೆಗಳ ಕಾಮಗಾರಿಗಳ ಕ್ರಿಯಾಯೋಜನೆ ತಯಾರಿಸುವುದು ಅಂದಾಜು ಪತ್ರಿಕೆ ತಾಂತ್ರಿಕ ಪರಿಶೀಲನೆ ಮಾಡುವುದು, ತುಂಡುಗುತ್ತಿಗೆ ಕರಾರು ಪತ್ರ ಮಂಜೂರು ಮಾಡುವುದು ಹಾಗೂ ಉಪ–ವಿಭಾಗದಿಂದ ಬರುವ ಕಾಮಗಾರಿ ಬಿಲ್ಲುಗಳ ತಪಾಸಣೆ ಹಾಗೂ ಇವುಗಳಿಗೆ ಸಂಬಂಧಪಟ್ಟ ವಹಿಗಳು ,ಕಡತಗಳು ಹಾಗೂ ಪತ್ರ ವ್ಯವಹಾರಗಳ ನಿರ್ವಹಣೆ ಮಾಡುವುದು ಹಾಗೂ ಅರಣ್ಯ ಇಲಾಖೆ , ಇತರೆ ಇಲಾಖೆಗಳಿಗೆ ಸಂಬಂಧಿಸಿದ ಅಂದಾಜು ಪತ್ರಿಕೆಗಳ ತಾಂತ್ರಿಕ ಪರಿಶೀಲನೆ ಮಾಡುವುದು ಹಾಗೂ ಸಭೆಗಳಿಗೆ ಬೇಕಾಗುವ ಮಾಹಿತಿಯನ್ನು ತಯಾರಿಸಿ ಕೊಡುವುದು

**ಭೂ–ವಿಜ್ಞಾನಿ (ನಿಯೋಜನೆ)** ಈ ವಿಭಾಗದ ವ್ಯಾಪ್ತಿಯಲ್ಲಿ ಬರುವ ಎಲ್ಲಾ 6 ಉಪ ವಿಭಾಗಗಳ ವ್ಯಾಪ್ತಿಯ ಕುಡಿಯುವ ನೀರಿನ ಸಲುವಾಗಿ ಬೋರ್‌ವೆಲ್ ಪಾಯಿಂಟ್ (ಜಲಮೂಲ) ಕಂಡುಹಿಡಿಯುವುದು. ಎಲ್ಲಾ ತಾಲೂಕಿನ ಬೋರ್‌ವೆಲ್ ತೆರೆದ ಬಾವಿ ಇವುಗಳ ನೀರಿನ ಸ್ಯಾಂಪಲ್ ಪಡೆದು ಕುಡಿಯಲು ಯೋಗ್ಯವೆಂದು ತಪಾಸಣೆ ಮಾಡುವುದು, ಮೇಲಾಧಿಕಾರಿಗಳಿಗೆ ವರದಿ ಸಲ್ಲಿಸುವುದು, ಬೋರ್‌ವೆಲ್‌ಗಳ ಅಂಕಿಅಂಶ ನೀಡುವುದು ಇತ್ಯಾದಿ.

**ಲೆಕ್ಕ ಪತ್ರ ಶಾಖೆ :–** ಈ ಶಾಖೆಯಲ್ಲಿ ಒಬ್ಬ ಲೆಕ್ಕ ಪರಿಶೋಧನಾಧಿಕಾರಿಗಳು 2 ಜನ ಪ್ರಥಮ ದರ್ಜೆ ಲೆಕ್ಕ ಸಹಾಯಕರು 4 ಜನ ದ್ವಿತೀಯ ದರ್ಜೆ ಲೆಕ್ಕ ಸಹಾಯಕರ ಮಂಜೂರಾದ ಹುದ್ದೆ ಇರುತ್ತದೆ. ಇವುಗಳಲ್ಲಿ ದ್ವಿತೀಯ ದರ್ಜೆ ಲೆಕ್ಕ ಸಹಾಯಕರ 1 ಹುದ್ದೆ ಖಾಲಿ ಇರುತ್ತದೆ.

**ಲೆಕ್ಕ ಪರೀಶೋಧನಾಧಿಕಾರಿಗಳು** ವಿಭಾಗ ಕಚೇರಿಗೆ ಸಂಬಂಧಿಸಿದ ಕಾಮಗಾರಿಗಳ ಲೆಕ್ಕ ಪರಿಶೋಧನೆ, ಲೆಕ್ಕ ಶಾಖೆಗೆ ಇತರೇ ಸಿಬ್ಬಂದಿಗಳಿಗೆ ಮಾರ್ಗದರ್ಶನ ಹಾಗೂ ಕಾರ್ಯನಿರ್ವಾಹಕ ಇಂಜನೀಯರರಿಗೆ ಲೆಕ್ಕ ನಿರ್ವಹಣೆ ಹಾಗೂ ಪರಿಶೋಧನೆಗೆ ಸಂಬಂಧಿಸಿದ ಹಾಗೂ ವಿಭಾಗದ ಹಣಕಾಸಿಗೆ ಸಂಬಂಧಿಸಿದ ಸಲಹೆ ಕಾರ್ಯನಿರ್ವಹಿಸುವರು.

**ಒಬ್ಬ ಪ್ರಥಮ ದರ್ಜೆ ಲೆಕ್ಕ ಸಹಾಯಕರು** ಹಳಿಯಾಳ ಉಪ–ವಿಭಾಗಕ್ಕೆ ಸಂಬಂಧಿಸಿದ ಲೆಕ್ಕ ಪರಿಶೋಧನೆ ಕಾಮಗಾರಿ ಬಿಲ್ಲುಗಳ ತಪಾಸಣೆ ವರ್ಕ ರಜಿಸ್ಟರ ಹಾಗೂ ಕಂಟ್ರಾಕ್ಟರ್ ರಜಿಸ್ಟರ್ ನಿರ್ವಹಣೆ, ಮಾಸಿಕ ಹಾಗೂ ವಾರ್ಷಿಕ ಲೆಕ್ಕ ಹೊಂದಾಣಿಕೆ ಇತ್ಯಾದಿ ಕೆಲಸ ನಿರ್ವಹಿಸುವರು.

**ಒಬ್ಬ ಪ್ರಥಮ ದರ್ಜೆ ಲೆಕ್ಕ ಸಹಾಯಕರು** ಸಿದ್ದಾಪುರ ಉಪ ವಿಭಾಗದ ಲೆಕ್ಕ ಪರಿಶೋಧನೆ, ಕಾಮಗಾರಿ ಬಿಲ್ಲುಗಳ ತಪಾಸಣೆ, ವಾರ್ಷಿಕ ಲೆಕ್ಕ ಹೊಂದಾಣಿಕೆ ಕಂಟ್ರಾಕ್ಟರ್ ರಜಿಸ್ಟರ್ ನಿರ್ವಹಣೆ, ಇತ್ಯಾದಿ ಕೆಲಸ ನಿರ್ವಹಿಸುವರು.

**ಒಬ್ಬ ದ್ವಿತೀಯ ದರ್ಜೆ ಲೆಕ್ಕ ಸಹಾಯಕರವರು**_ಶಿರಸಿ ಮತ್ತು ಜೋಯಿಡಾ ಉಪ ವಿಭಾಗಳ ಆಡಿಟ್ ಕೆಲಸ ಲೆಕ್ಕ ಪರಿಶೋಧನೆ ವರ್ಕ ರಜಿಸ್ಟರ ಹಾಗೂ ಕಂಟ್ರಾಕ್ಟರ್ ರಜಿಸ್ಟರ್ ನಿರ್ವಹಣೆ, ಮಾಸಿಕ ಹಾಗೂ ವಾರ್ಷಿಕ ಲೆಕ್ಕ ಹೊಂದಾಣಿಕೆ ಇತ್ಯಾದಿ ಕೆಲಸ ನಿರ್ವಹಿಸುವರು.

**ಒಬ್ಬ ದ್ವಿತೀಯ ದರ್ಜೆ ಸಹಾಯಕರು ನಿಯೋಜನೆಯ ಮೇಲೆ ಸೇವೆ ಸಲ್ಲಿಸುತ್ತಿದ್ದು,** ನಗದು ಶಾಖೆ ಉಗ್ರಾಣ ನಿರ್ವಹಣೆ, ಅನುದಾನ ವೆಚ್ಚದ ವಿವರ, ಲೆಕ್ಕ ಪರಿಶೀಲನೆ ನಗದು ಕ್ಯಾಶ್ ಬುಕ್ ನಿರ್ವಹಣೆಗೆ ಸಂಬಂಧಿಸಿದ ಪತ್ರ ವ್ಯವಹಾರ

**ಒಬ್ಬ ದ್ವಿತೀಯ ದರ್ಜೆ ಲೆಕ್ಕ ಸಹಾಯಕ** ಇವರು ಯಲ್ಲಾಪುರ ಉಪ ವಿಭಾಗದ ಆಡಿಟರ್ ಕೆಲಸ ಲೆಕ್ಕ ಪರಿಶೋಧನೆ ವರ್ಕ ರಜಿಸ್ಟರ ಹಾಗೂ ಕಂಟ್ರಾಕ್ಟರ್ ರಜಿಸ್ಟರ್ ನಿರ್ವಹಣೆ, ಮಾಸಿಕ ಹಾಗೂ ವಾರ್ಷಿಕ ಲೆಕ್ಕ ಹೊಂದಾಣಿಕೆ ಇತ್ಯಾದಿ ಕೆಲಸ ನಿರ್ವಹಿಸುವರು.

**ಒಬ್ಬ ದ್ವಿತೀಯ ದರ್ಜೆ ಲೆಕ್ಕ ಸಹಾಯಕರು** ಮುಂಡಗೋಡ ಉಪ–ವಿಭಾಗದ ಆಡಿಟರ್ ಕೆಲಸ ಲೆಕ್ಕ ಪರಿಶೋಧನೆ ವಾಟರ ಸಪ್ಲೆ ಶೆಡ್ಯೂಲ್ ತಯಾರಿಸುವದು.ಇತ್ಯಾದಿ ಕಾರ್ಯನಿರ್ವಾಹಕ ಇಂಜನೀಯರರು ಮತ್ತು ಲೆಕ್ಕಪರಿಶೋಧನಾಧಿಕಾರಿಗಳ ನಿರ್ದೇಶನದಂತೆ ಕಾರ್ಯನಿರ್ವಹಿಸುವರು.

**ಉಗ್ರಾಣ ಶಾಖೆ:–** ಈ ಶಾಖೆಯಲ್ಲಿ ಒಬ್ಬ ಪ್ರಥಮ ದರ್ಜೆ ಭಂಡಾರ ಪಾಲಕರ ಹುದ್ದೆ ಮಂಜೂರಾಗಿದ್ದು ಈಗ ಖಾಲಿ ಇರುತ್ತದೆ. **ನಿಯೋಜನೆಯ ಮೇಲೆ** ಕಾರ್ಯನಿರ್ವಹಿಸುತ್ತಿರುವ ದ್ವಿತೀಯ ದರ್ಜೆ ಸಹಾಯಕರು ಈ ಶಾಖೆಯ ಹೆಚ್ಚುವರಿ ಕಾರ್ಯಭಾರವನ್ನು ನಿರ್ವಹಿಸುತ್ತಿದ್ದು. ವಿಭಾಗ ಕಾರ್ಯಾಲಯದ ವಾಹನ ನಿರ್ವಹಣೆ ಒಟ್ಟೂ ವಿಭಾಗಕ್ಕೆ ಸಂಬಂಧಿಸಿದ ವಾಹನಗಳಿಗೆ ಸಂಬಂಧಿಸಿದ ಪತ್ರ ವ್ಯವಹಾರ ದಾಸ್ತಾನು, ಟಿ&ಪಿ, ಫರ್ನಿಚರಗಳ ಲೆಕ್ಕ ಪತ್ರ ನಿರ್ವಹಣೆ ಹಾಗೂ ಉಗ್ರಾಣ ಶಾಖೆಗೆ ಸಂಬಂಧಿಸಿದ ಪತ್ರ ವ್ಯವಹಾರ. ನಿರ್ವಹಿಸುವರು.

**ಕೈಪಿಡಿ–3:–** ನಿರ್ಣಯ ತೆಗೆದುಕೊಳ್ಳುವಲ್ಲಿ ಪಾಲಿಸಬೇಕಾದ ವಿಧಿ ವಿಧಾನಗಳು ಜವಾಬ್ದಾರಿಗಳು ಹಾಗೂ ಅನುಸರಿಸಲಾಗುವ ನಿಯಮಾವಳಿಗಳ ಬಗ್ಗೆ. ಮೇಲ್ಕಂಡ ನಾಲ್ಕು ಶಾಖೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಪ್ರಥಮ ದರ್ಜೆ ಸಹಾಯಕ ದ್ವಿತೀಯ ದರ್ಜೆ ಸಹಾಯಕರು, ಸಹಾಯಕ ಇಂಜನೀಯರ ಮತ್ತು ಕಿರಿಯ ಇಂಜನೀಯರ ಪ್ರಥಮ ದರ್ಜೆ ಲೆಕ್ಕ ಸಹಾಯಕರು, ದ್ವಿತೀಯ ದರ್ಜೆ ಲೆಕ್ಕ ಸಹಾಯಕರುಗಳು ವಿಷಯ ನಿರ್ವಹಕರಾಗಿ ಕರ್ತವ್ಯ ನಿರ್ವಹಿಸಿ ಇತರೇ ಕಾರ್ಯಾಲಯಗಳೊಂದಿಗೆ ನಡೆಸಲಾಗುವ ಪತ್ರ ವ್ಯವಹಾರಗಳ ಕಡತಗಳನ್ನು ನಿರ್ವಹಿಸುವರು. ಹಾಗೂ ಈ ಕಾರ್ಯಾಲಯದಲ್ಲಿ ನಿರ್ಧಾರ

ಕೈಗೊಳ್ಳುವ ಪ್ರಕರಣಗಳನ್ನು ಪರಿಶೀಲಿಸಿ ಕಡತಗಳನ್ನು ಶಾಖಾ ಮುಖ್ಯಸ್ಥರ ಮುಖಾಂತರ ಕಾರ್ಯನಿರ್ವಾಹಕ ಇಂಜಿನೀಯರಿಗೆ ತಿಳಿಸಿ ಅವರಿಂದ ಅನುಮೋದನೆ ಪಡೆದ ನಂತರ ಮತ್ತು ಲಿಖಿತ ಆದೇಶದನುಸಾರ ಸೂಕ್ತ ಆದೇಶಗಳನ್ನು ಹೊರಡಿಸಲಾಗುತ್ತದೆ. ನಿರ್ಧಾರ ಕೈಗೊಳ್ಳುವ ಸಂಬಂಧ ವಿವಿಧ ಶಾಖೆಗಳು ಅನುಸರಿಸುತ್ತಿರುವ ನಿಯಮಾವಳಿಗಳು ಸಂಹಿತೆಗಳು ಈ ಕೆಳಗಿನಂತಿವೆ.

1) **ಆಡಳಿತ ಶಾಖೆ**:– 1) ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು.

2) ಕರ್ನಾಟಕ ಆರ್ಥಿಕ ಸಂಹಿತೆ.

3)ಕರ್ನಾಟಕ ಖಜಾನೆ ಸಂಹಿತೆ.

4)ಕರ್ನಾಟಕ ನಾಗರೀಕ ಸೇವಾ ( ನಡತೆ) ನಿಯಮಗಳು.

5) ಸಾದಿಲ್ವಾರು ಕೈಪಿಡಿ ಇವರುಗಳನ್ನು ಅನುಸರಿಸಲಾಗುತ್ತದೆ.

6) ಮಾಹಿತಿ ಹಕ್ಕು ಅಧಿನಿಯಮ –2005 ರ ಕೈಪಿಡಿ

2) **ಲೆಕ್ಕ ಶಾಖೆ**:– ಲೋಕೋಪಯೋಗಿ ಇಲಾಖೆಯ ಸಂಹಿತೆ ಭಾಗ–1 ಮತ್ತು ಭಾಗ–2 ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಆಧ್ಯಾದೇಶ 2000 ಲೋಕೋಪಯೋಗಿ ಲೆಕ್ಕ ಸಂಹಿತೆ ಭಾಗ–1 ಮತ್ತು ಭಾಗ–2 ನ್ನು ಅನುಸರಿಸಲಾಗುವದು.

1) ಭೂಸ್ವಾಧೀನ ಕಾಯ್ದೆ.

2) ಉಗ್ರಾಣ ಕೈಪಿಡಿ

3) ಮಧ್ಯಸ್ಥಿಕೆ ಕಾಯ್ದೆ 1996

4) ಕರ್ನಾಟಕ ನೀರಾವರಿ ಕಾಯ್ದೆ 1956

5) ಸಾದಿಲ್ವಾರು ವೆಚ್ಚದ ಕೈಪಿಡಿ,

6) ಕರ್ನಾಟಕ ಖಜಾನೆ ಸಂಹಿತೆ.

7) ಚಾಲ್ತಿ ದರಪಟ್ಟಿ

8) ಬಜೆಟ್ ಕೈಪಿಡಿ

9) KTTP ಅಧಿನಿಯಮ ಕೈಪಿಡಿ

**3) ತಾಂತ್ರಿಕ ಶಾಖೆ:–**

1) ಲೋಕೋಪಯೋಗಿ ಇಲಾಖಾ ಸಂಹಿತೆ ಭಾಗ–I

2) ಲೋಕೋಪಯೋಗಿ ಇಲಾಖಾ ಸಂಹಿತೆ ಭಾಗ–II

3) ಲೋಕೋಪಯೋಗಿ ಹ್ಯಾಂಡಬುಕ್.

4) ಲೋಕೋಪಯೋಗಿ ಇಲಾಖೆ ದರಪಟ್ಟಿ.

**4) ಉಗ್ರಾಣ ಶಾಖೆ:**_1) ಉಗ್ರಾಣ ಕೈಪಿಡಿ

2) ಆರ್ಥಿಕ ಸಂಹಿತೆ

3) KTTP ಅಧಿನಿಯಮ ಕೈಪಿಡಿ

**ಕೈಪಿಡಿ–4:–** ಈ ಕಾರ್ಯಾಲಯದಲ್ಲಿ ಶಾಖಾವಾರು ಈ ಕೆಳಗಿನ ದಾಖಲೆಗಳನ್ನು ನಿರ್ವಹಿಸಲಾಗುತ್ತಿದೆ.

1) ಕಾರ್ಯನಿರ್ವಾಹಕ ಇಂಜಿನೀಯರವರ, ಅಧೀಕ್ಷಕ ಇಂಜಿನೀಯರವರ ಮತ್ತು ಮುಖ್ಯ ಇಂಜಿನೀಯರವರ ಮಟ್ಟದಲ್ಲಿ ಮಂಜೂರಾದ ಅಂದಾಜು ಪತ್ರಿಕೆಗಳು ಮತ್ತು ಅದಕ್ಕೆ ಸಂಬಂಧ ಪಟ್ಟ ಕಡತಗಳು.

2) ಪ್ರಗತಿಯ ವರದಿಗಳು.

3) ಆಯವ್ಯಯಕ್ಕೆ ಸಂಬಂಧಪಟ್ಟ ಆಯವ್ಯಯ ಪ್ರಸ್ತಾವನೆ ಮತ್ತು ಆಯವ್ಯಯ ಪಟ್ಟಿ.

4) ಭಾರಿ ಹಾಗೂ ಸಣ್ಣ ಅಂದಾಜುಗಳ ಮಂಜೂರಾತಿ ವಹಿ.

5) ಪಿ.ಆರ್.ಇ.ಡಿ.ವಶದಲ್ಲಿರುವ ಸೇತುವೆ ಮತ್ತು ಕಲ್ವರ್ಟಗಳ ವಹಿ.

6) ದರ ಸೂಚಿಕ.

7) ಆಯವ್ಯಯ ಕಾಮಗಾರಿಗಳ ವಹಿ.

8) ಮೇಲಾಧಿಕಾರಿಗಳಿಂದ ಮಂಜೂರಾದ ಅಂದಾಜುಗಳ ಪಟ್ಟಿ

ಪಿ.ಬಿ.ಯಲ್ಲಿರುವ ರಿಜಿಸ್ಟರ್ ಮಾಹಿತಿ.

1) ತುಂಡು ಗುತ್ತಿಗೆ ಪತ್ರ ಅನುಮೋದನೆ ರಿಜಿಸ್ಟರ್.

2) ಸೇತುವೆಗಳ ರಿಜಿಸ್ಟರ್.

3) ಕಟ್ಟಡಗಳ ರಿಜಿಸ್ಟರ್.

4) ಮೇಲಾಧಿಕಾರಿಗಳಿಂದ ಮಂಜೂರಾದ ಅಂದಾಜು ಪತ್ರಿಕೆಗಳ ರಿಜಿಸ್ಟರ್.

**ದಾಖಲೆಗಳು:– ಆಡಳಿತ ಶಾಖೆ**. ಉಪ–ವಿಭಾಗ ಕಚೇರಿಯ ತಪಾಸಣೆಗೆ ಅಗತ್ಯವಿರುವ ವಹಿಗಳು ಮತ್ತು ದಾಖಲಾತಿಗಳ ಪಟ್ಟಿ.

1) ಹಾಜರಾತಿ ವಹಿ.
2) ಪತ್ರಾಂಕಿತ ಮತ್ತು ಪತ್ರಾಂಕಿತವಲ್ಲದ ಅಧಿಕಾರಿಗಳ/ಸಿಬ್ಬಂದಿಗಳ ಸಾಂದರ್ಭಿಕ ರಜೆ & ಸಾಂದರ್ಭಿಕ ರಜೆ ಕಡತ ಅರ್ಜಿಗಳೊಂದಿಗೆ.
3) ಸಂಘಟನಾ ಪಟ
4) ಮಂಜೂರಾದ ಕಾರ್ಯನಿರ್ವಹಿಸುತ್ತಿರುವ ಮತ್ತು ಖಾಲಿ ಹುದ್ದೆಗಳ ತಖ್ತೆ.
5) ಕೆಲಸ ವಿತರಣಾ ತಖ್ತೆ
6) ವೇತನ ಬಡ್ತಿಯ ನಿಗಾ ವಹಿ.
7) ವೇತನ ಬಡ್ತಿಯ ಮಂಜೂರಾತಿ ವಹಿ.
8) ಇನ್ ಕಂಬೆನ್ಸಿ ವಹಿ.
9) ರಹಸ್ಯ ವರದಿಗಳ ವಹಿ.
10) ಆಸ್ತಿ ಮತ್ತು ದಾಯತ್ವ ತಖ್ತೆ ವಹಿ.
11) ಮಹಾಲೇಖಪಾಲರು ಮತ್ತು ಇತರರಿಗೆ ಕಳುಹಿಸಲಾದ ನಿವೃತ್ತಿ ವೇತನ ಪತ್ರಗಳ ನಿಗಾವಹಿ.
12) ಸೇವಾ ವಹಿ.
13) ಇಲಾಖಾ ಪರೀಕ್ಷೆಗಳ ನಿಗಾ ವಹಿ.
14) ಪರಿವೀಕ್ಷಣಾ ಟಿಪ್ಪಣಿ ಪುಸ್ತಕ.
15) ಕಚೇರಿ ನೌಕರರ ಮನೆಗಳ ವಿಳಾಸ,
16) ವಿಧಾನ ಸಭೆ/ಪರಿಷತ ಪ್ರಶ್ನೆಗಳ ವಹಿ.
17) ವೈಯಕ್ತಿಕ ವಹಿ.
18) ಪ್ರತಿ ಮಾಹೆಗಳ ಬಾಕಿ ಪಟ್ಟಿ.
19) ಸ್ಟಾಂಪು ವಹಿ ಪರಿವೀಕ್ಷಣಾ ದಿನದಂದು ಬಾಕಿ ಇರುವ ಸ್ಟಾಂಪುಗಳು ಮತ್ತು ಸ್ಟಾಂಪುಗಳ ಬೆಲೆಯನ್ನು ತೋರಿಸುವ ಕುರಿತು.
20) ಸಾಮಾನ್ಯ ಸ್ವೀಕೃತಿ ವಹಿ.
21) ರವಾನೆ ವಹಿ.
22) ಸ್ಥಳೀಯ ವಿತರಣಾ ರವಾನೆ.
23) ಕಚೇರಿ ಆದೇಶ ಪುಸ್ತಕ.
24) ಸಾಮಾನ್ಯ ನಗದು ಪುಸ್ತಕ
25) ವೇತನ ಬಟವಾಡೆ ವಹಿ.
26) ಪ್ರಯಾಣ ಭತ್ಯೆ ಬಟವಾಡೆ ವಹಿ.
27) ಸಾದಿಲ್ವಾರು ವೆಚ್ಚ ವಹಿ ವೋಚರಗಳ ಸಹಿತ.

**ಲೆಕ್ಕ ಪತ್ರ ಶಾಖೆ:–**

1) ನಗದು ಪುಸ್ತಕ.
2) ಚೆಕಮೆಮೋ ಪುಸ್ತಕ.
3) ಎಲ್.ಓ.ಸಿ.ರಿಜಿಸ್ಟರ್.
4) ರೆಮಿಟೆನ್ಸ್ ರಿಜಿಸ್ಟರ್.
5) ಚೆಕ್ ರಿಸೀವ್ಡ್ ರಿಜಿಸ್ಟರ್.
6) ಬಿ.ಆರ್.ರಿಜಿಸ್ಟರ್.
7) ಖಾಲಿ ಅಳತೆ ಪುಸ್ತಕಗಳ ವಹಿ.
8) ಎಂ.ಪಿ.ಡಬ್ಲು ರಿಜಿಸ್ಟರ್.
9) ಟಿ.ಇ.ಓ ರಿಜಿಸ್ಟರ್.
10) ವರ್ಕ್ಸ ರಿಜಿಸ್ಟರ್.
11) ನಮೂನೆ–81.
12) ಅಳತೆ ಪುಸ್ತಕಗಳ ಅರ್ಧವಾರ್ಷಿಕ ನಿಯತಕಾಲಿಕೆ.

**ಉಗ್ರಾಣ ಶಾಖೆ:–**

1) ದಾಸ್ತಾನು ಸ್ವೀಕೃತಿ ವಹಿ (ಪಿಡಬ್ಲ್ಯು ಎ–4)
2) ದಾಸ್ತಾನು ವಿತರಣಾ ವಹಿ (ಪಿಡಬ್ಲ್ಯು ಎ–4).
3) ದಾಸ್ತಾನು ಖರೀದಿ ಪುಸ್ತಕ.
4) ಅರ್ಧ ವಾರ್ಷಿಕ ನಿಯತಕಾಲಿಕ ವಹಿ (ಪಿಡಬ್ಲ್ಯು ಎ–15).
5) ಖಾಲಿ ಸಾಮಗ್ರಿಗಳ (ಖಾಲಿ ಸಿಮೆಂಟ್ ಚೀಲ ಖಾಲಿ ಡಾಂಬರ್ ಬ್ಯಾರೆಲ್ಗಳ ವಹಿ( ಎಸ್.ಎಂಜಿ–7)
6) ಖಾಲಿ ಅಳತೆ ಪುಸ್ತಕಗಳ ವಹಿ (ಪಿಡಬ್ಲ್ಯು ಜಿ–28).
7) ಲೇಖನ ಸಾಮಗ್ರಿಗಳ ಸ್ವೀಕೃತಿ ಮತ್ತು ವಿತರಣಾ ವಹಿ.
8) ಕಚೇರಿ ಪೀಠೋಪಕರಣಗಳ ವಹಿ (ಕೆ.ಎಫ್.ಸಿ–34 ಎ)
9) ಉಪಕರಣ ಮತ್ತು ಸ್ಥಿರಯಂತ್ರಗಳ ಸ್ವೀಕೃತಿ ವಹಿ (ಪಿಡಬ್ಲ್ಯು ಎ–4)
10) ಉಪಕರಣ ಮತ್ತು ಸ್ಥಿರಯಂತ್ರಗಳ ವಿತರಣಾವಹಿ (ಪಿಡಬ್ಲ್ಯು ಎ–4)
11) ಸೆಪ್ಟಂಬರ್ ಅಂತ್ಯದ ಉಪಕರಣ ಮತ್ತು ಸ್ಥಿರಯಂತ್ರಗಳ ವಾರ್ಷಿಕ ನಿಯತಕಾಲಿಕೆ (PWG–17
12) ಅಳತೆ ಪುಸ್ತಕಗಳ ಅರ್ಧವಾರ್ಷಿಕ ನಿಯತಕಾಲಿಕೆ (PWG–17). ಬಿಡುಗಡೆಯಾದ ಸಾಮಗ್ರಿಗಳ ಲೆಕ್ಕದ ವಹಿ.

**ಕೈಪಿಡಿ:–5 :–** ಇಲಾಖೆಯಲ್ಲಿ ನೀತಿ ನಿಯಮಗಳನ್ನು ಅಥವಾ ಆಡಳಿತವನ್ನು ನಡೆಸುವಲ್ಲಿ ಪಡೆಯುವ ಸಲಹಾ ಸೂತ್ರಗಳ ಅಥವಾ ಸಾರ್ವಜನಿಕ ಸದಸ್ಯರುಗಳಿಂದ ಸಲಹೆ ಪಡೆಯುವ ಬಗ್ಗೆ ಇರುವ ವ್ಯವಸ್ಥೆ.

------ ಯಾವುದೂ ಇರುವದಿಲ್ಲಾ ---------

**ಕೈಪಿಡಿ–6**:– ಇಲಾಖೆಯಲ್ಲಿ ನಿಗಮ/ಪರಿಷತ್ತು/ಸಮಿತಿ ಮತ್ತು ಇತರೇ ಸಂಸ್ಥೆಗಳ ವಿವರ ಮತ್ತು ಅದರ ಉದ್ದೇಶ ಮತ್ತು ಈ ಸಂಸ್ಥೆಗಳ ಸಭೆಗಳು ಮತ್ತು ಸಭೆಯ ನಡವಳಿಕೆಗಳು ಸಾರ್ವಜನಿಕರಿಗೆ ಲಭ್ಯವಿರುವ ಬಗ್ಗೆ.

------ ಯಾವುದೂ ಇರುವದಿಲ್ಲಾ ------

**ಕೈಪಿಡಿ–7**:– ಇಲಾಖೆಯ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದ ನಿರ್ದೇಶಿಕೆ ಶ್ರೀ ಎಂ ರೇವಣಸಿದ್ದಯ್ಯ, ಕಾರ್ಯನಿರ್ವಾಹಕ ಇಂಜಿನೀಯರು, (ಪ್ರಭಾರ) ಮ.ಹುದ್ದೆ–1

**ತಾಂತ್ರಿಕ ಹುದ್ದೆ.**

ಸಹಾಯಕ ಇಂಜಿನೀಯರ ಮಂಜೂರಾತಿ ಹುದ್ದೆ.–2 1) ----- ಖಾಲಿ------
2) ----- ಖಾಲಿ------

ಕಿರಿಯ ಇಂಜಿನೀಯರ ಮಂಜೂರಾತಿ ಹುದ್ದೆ–5 1) ಶ್ರೀಮತಿ.ಕುಸುಮಾಕ್ಷಿ.ವಿ. ಹೆಗಡೆ.ಸ.ಇಂ–2
2) S.I.ನಾಯ್ಕ
3) R.M.ಹೆಗಡೆ.
4) ಶ್ರೀಮತಿ.ಭಾಗೀರಥಿ.ಜಿ.ಹೆಗಡೆ.ಸ.ಇಂ–2
5) ----- ಖಾಲಿ ಇರುತ್ತದೆ.-----

ಆಕೃತಿ ರಚನಾ ಕಾರರು ಮಂಜೂರಾತಿ ಹುದ್ದೆ.–2 1) ----- ಖಾಲಿ ಇರುತ್ತದೆ.-----
2) ----- ಖಾಲಿ ಇರುತ್ತದೆ.-----

ಸಂಖ್ಯಾ ನಿರೀಕ್ಷಕರು ಮ.ಹುದ್ದೆ–1 ------- ಖಾಲಿ---------

ಮೆಕ್ಯಾನಿಕ್.ಮ.ಹುದ್ದೆ–5 ------- ಖಾಲಿ---------

ಪಂಪ ಮೆಕ್ಯಾನಿಕ ಹುದ್ದೆ–1 ------- ಖಾಲಿ---------

**ಆಡಳಿತ ಶಾಖೆ**

ಅಧೀಕ್ಷಕರು–ಮಂಜೂರಾತಿ.ಹುದ್ದೆ–1 ಶ್ರೀ.ಜಿ.ಎಂ.ಗಾಂವಕರ.

ಪ್ರಥಮ ದರ್ಜೆ ಸಹಾಯಕರ ಮಂಜೂರಾತಿ ಹುದ್ದೆ–1 ----- ಖಾಲಿ-----

ದ್ವಿತೀಯ ದರ್ಜೆ ಸಹಾಯಕರು ಮಂಜೂರಾತಿ ಹುದ್ದೆ–2 1) ಶ್ರೀಮತಿ ಸುಶೀಲಾ.ಎಲ್.ಶಿರಾಲಿ.
2)ಶ್ರೀ ಎಂ.ಟಿ.ನಾಯ್ಕ

ಬೆರಳಚ್ಚುಗಾರರು ಮಂಜೂರಾತಿ ಹುದ್ದೆ–2 1) ಶ್ರೀಮತಿ ಲಲಿತಾ ಜಿ.ಹೆಗಡೆ
2) ಶ್ರೀಮತಿ ಮಹಾದೇವಿ.ಜಿ.ನಾಯ್ಕ

ವಾಹನ ಚಾಲಕರು ಮಂಜೂರಾತಿ ಹುದ್ದೆ–2 1) ಶ್ರೀ. ಗಣೇಶ.ಎನ್.ನೇತ್ರಕರ್.
2) ------ ಖಾಲಿ-----

"ಡಿ" ಗ್ರೂಪ್ ಸಿಬ್ಬಂದಿಗಳು ಮಂಜೂರಾತಿ ಹುದ್ದೆ–4 1) ಸೂರ್ಯಕಾಂತ .ಜಿ.ಕಾನಡೆ.

2) ಟಿ.ಜಯಪ್ಪ.

3) ----- ಖಾಲಿ ಇರುತ್ತದೆ.-----

4) ----- ಖಾಲಿ ಇರುತ್ತದೆ.-----

**ಲೆಕ್ಕ ಪತ್ರ ಶಾಖೆ**

ಲೆಕ್ಕಪರಿಶೋಧನಾಧಿಕಾರಿಗಳು ಮಂಜೂರಾತಿ ಹುದ್ದೆ–1 ಶ್ರೀ.ಗಿರೀಶ.ಡಿ.ನಾಯ್ಕ.

ಪ್ರಥಮ ದರ್ಜೆ ಲೆಕ್ಕ ಸಹಾಯಕರು ಮಂಜೂರಾತಿ ಹುದ್ದೆ–2 1) ಶ್ರೀ ಗಜಾನನ ಎನ್ ನಾಯ್ಕ

2) ಶ್ರೀ ಮೊಹಮ್ಮದ್.ಬಿ.ರೋಷನ್ ಅಲಿ.

ದ್ವಿತೀಯ ದರ್ಜೆ ಸಹಾಯಕರು ಮಂಜೂರಾತಿ ಹುದ್ದೆ–4 1) ಶ್ರೀಮತಿ ರಮಾ.ಕೆ.ಶಿರ್ಶೀಕರ

2) ಶ್ರೀ.ಜಿ.ಎಸ್.ಮುಕ್ರಿ.

3) ಶ್ರೀಮತಿ ದೇವಿ ಎಸ್ ಗೌಡ.

4) ----- ಖಾಲಿ-------

**ಉಗ್ರಾಣ ಶಾಖೆ**

ಉಗ್ರಾಣ ಪಾಲಕರು–1 ------ ಖಾಲಿ---------

**ನಿಯೋಜನೆಯ ಮೇಲೆ ಕಾರ್ಯನಿರ್ವಹಿಸುತ್ತಿರುವವರು.**

1) ಶ್ರೀ ಎಂ.ಆರ್.ಹೆಗಡೆ, ಭೂ.ವಿಜ್ಞಾನಿ.

2) ಶ್ರೀ.ಆರ್.ಶ್ರೀನಿವಾಸ, ದ್ವಿ.ದ.ಸ.

3) ಶ್ರೀ.ಎಂ.ಟಿ.ಮಡಿವಾಳ ಡಿ.ಗ್ರೂಪ್.

**ಕೈಪಿಡಿ–8**:– ಇಲಾಖೆಯ ಅಧಿಕಾರಿಗಳ ಮತ್ತು ಸಿಬ್ಬಂದಿ ವರ್ಗದವರ ತಿಂಗಳ ವೇತನ/ಪ್ರತಿ ಫಲ ಮತ್ತು ಅದನ್ನು ನೀಡುವ ಸೂತ್ರಗಳು.

ಕಾರ್ಯನಿರ್ವಹಕ ಇಂಜಿನೀಯರರು ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗ ಶಿರಸಿ ಕಾರ್ಯಾಲಯದ ಅಧಿಕಾರಿ ಸಿಬ್ಬಂದಿಗಳಿಗೆ ಕರ್ನಾಟಕ ಸರ್ಕಾರದ ಸಂಚಿತ ನಿಧಿಯಿಂದ ವೇತನ ಹಾಗೂ ಭತ್ಯೆಗಳನ್ನು ಪಾವತಿಸಲಾಗುತ್ತಿದೆ.

| ಅ.ನಂ | ಹುದ್ದೆ | ಹೆಸರು | ವೇತನ ಶ್ರೇಣಿ | ಪ್ರಸುತ್ತ ಮೂಲ ವೇತನ |
|---|---|---|---|---|
| 1 | ಕಾರ್ಯನಿರ್ವಾಹಕ ಇಂಜಿನೀಯರ | ಶ್ರೀ ಎಂ ರೇವಣಸಿದ್ದಯ್ಯ (ಪ್ರಭಾರ) | 28100–50100 | 31200=00 |
| 2 | ಸಹಾಯಕ ಇಂಜಿನೀಯರ | ತೆರವಾಗಿದೆ. | – | – |
| 3 | ಕಿರಿಯ ಇಂಜಿನೀಯರ | 1) ಶ್ರೀ.R.M.ಹೆಗಡೆ | 21600–40050 | 31200=00 |
| | | 2) ಶ್ರೀ.S.I.ನಾಯ್ಕ | 21600–40050 | 31200=00 |
| | | 3) ಶ್ರೀಮತಿ K.V.ಹೆಗಡೆ | 22800=43200 | 34500=00 |
| | | 4) ಶ್ರೀಮತಿ ಭಾಗೀರಥಿ ಹೆಗಡೆ | 22800=43200 | 28100=00 |
| 4 | ಆಕೃತಿ ರಚನಾಕಾರರು | ತೆರವಾಗಿದೆ. | – | – |
| 5 | ಲೆಕ್ಕಪರಿಶೋಧನಾಧಿಕಾರಿ ಗಳು | ಶ್ರೀ.ಗಿರೀಶ.ಡಿ.ನಾಯ್ಕ | 22800–43200 | 34500=00 |
| 6 | ಅಧೀಕ್ಷಕರು | ಶ್ರೀ.ಜಿ.ಎಂ.ಗಾಂವಕರ | 17650–32000 | 29600=00 |
| 7 | ಪ್ರಥಮ ದರ್ಜೆಲೆಕ್ಕ ಸಹಾಯಕರು | ಶ್ರೀ ಗಜಾನನ ಎನ್ ನಾಯ್ಕ | 14550–26700 | 16800=00 |
| | | ಶ್ರೀ.ಬಿ.ಮೊಹಮ್ಮದ್ ರೋಷನ್ ಅಲಿ | 14550–26700 | 21000=00 |
| 8 | ದ್ವಿತೀಯ ದರ್ಜೆ ಲೆಕ್ಕ ಸಹಾಯಕರು | ಶ್ರೀಮತಿ ರಮಾ.ಕೆ.ಶಿರ್ಶಿಕರ | 14550–26700 | 21000=00 |
| | | ಶ್ರೀ ಆರ್ ಶ್ರೀನಿವಾಸ (ನಿಯೋಜನೆ ಸಿಬ್ಬಂದಿ) | 14550–26700 | 21600=00 |
| | | ಶ್ರೀಮತಿ ದೇವಿ ಎಸ್ ಗೌಡ | 11600–21000 | 12750=00 |
| | | ಶ್ರೀ.G.S.ಮುಕ್ರಿ | 11600–21000 | 12500=00 |
| 9 | ದ್ವಿತೀಯ ದರ್ಜೆ ಸಹಾಯಕರು | ಶ್ರೀಮತಿ ಸುಶೀಲಾ .ಎಲ್.ಶಿರಾಲಿ | 14550–26700 | 21600=00 |
| | | ಶ್ರೀ ಎಂ.ಟಿ.ನಾಯ್ಕ | 11600–21000 | 21000=00<br>SFN–100=00 |

| ಅ.ನಂ | ಹುದ್ದೆ | ಹೆಸರು | ವೇತನ ಶ್ರೇಣಿ | ಪ್ರಸುತ್ತ ಮೂಲ ವೇತನ |
|---|---|---|---|---|
| 10 | ಬೆರಳಚ್ಚುಗಾರರು | ಶ್ರೀಮತಿ ಮಹಾದೇವಿ.ಜಿ.ನಾಯ್ಕ | 11600–21000 | 21600=00<br>SP.135=00<br>SFN.75=00 |
| | | ಶ್ರೀಮತಿ.ಲಲಿತಾ ಜಿ ಹೆಗಡೆ | 11600–21000 | 21600=00<br>SP.135=00 |
| 11 | ವಾಹನ ಚಾಲಕರು | ಶ್ರೀ.ಗಣೇಶ.ಎನ್.ನೇತ್ರಕರ | 11600–21000 | 13600=00<br>SFN–100=00<br>SP.135=00 |
| 12 | ಗ್ರೂಪ್."ಡಿ" | ಶ್ರೀ.ಎಸ್.ಜಿ.ಕಾನಡೆ | 10400–16400 | 16400=00 |
| | | ಶ್ರೀ ಟಿ ಜಯಪ್ಪ | 11000–19000 | 13300=00 |

**2012–13 ನೇ ಸಾಲಿನ ಈ ವಿಭಾಗದ ಅನುದಾನ ಹಾಗೂ ವೆಚ್ಚದ ವಿವರ.**

| ಅ.ನಂ | ಲೆಕ್ಕ ಶೀರ್ಷಿಕೆ | ಅನುದಾನ | ವೆಚ್ಚ |
|---|---|---|---|
| | **ROADS & BRIDGES-PLAN & NON-PLAN** | | |
| 1 | 5054-04-337-7-01-132 Rural communication Yellapur (Constncy) | 533.00 | 510.779 |
| 1 | 5054-04-337-7-01-132 Rural communication M.N.P(Add) | - | - |
| 2 | 5054-03-337-0-74-172 RIDF-XVII Roads Briges & Foot Briges | 57.76 | 43.09 |
| 3 | 5054-03-337-0-74-422 RIDF-XVII Roads Briges & Foot Briges | 43.56 | 19.032 |
| 4 | 5054-03-337-0-74-436 RIDF-XVII Roads Briges & Foot Briges | 1.94 | - |
| 5 | 5054-03-337-0-74-172 RIDF-XV Roads Briges & Foot Briges | 0.20 | 0.184 |
| 6 | 5054-03-337-0-74-172 RIDF-XVI Roads Briges & Foot Briges | 145.00 | 145.00 |
| 7 | 3054-00-101-28-200 CMGSY (SDP) | 168.67 | 167.814 |
| 8 | 3054-00-101-0-28-200 CMGSY Road & Briges (Constncy) Add | 192.00 | 84.632 |
| 9 | 3054-00-101-0-29 CMGSY(Lumssum) | 70.00 | 23.017 |
| 10 | 3054-00-101-0-29 CMGSY Yellapur ,Mundgod & Sirsi(Constncy) | 250.00 | 209.611 |
| 11 | 3054-00-101-0-29 CMGSY | 319.16 | 300.963 |
| 12 | 3054-00-101-0-28-200 CMGSY (RoadPataval) | - | - |
| 13 | 3054-00-101-0-26-051 13 th Finace | 374.23 | 343.083 |
| | **TOTAL OF R &B (P)** | **2,155.52** | **1,847.205** |
| | NoN PLAN | | |
| II | 4215-02-800-0-02-132 Suvarnagrama Yojane | - | - |
| | 4215-02-800-0-02-422 Suvarnagrama SCP | - | - |
| | 4215-02-800-0-02-423 Suvarnagrama TSP | - | - |
| | **TOTAL OF (NP)** | **-** | **-** |
| | **MINOR IRRIGATION-PLAN** | | |
| 1 | 4702-00-101-9-04-133 Deveolpment of Tanks under Nanjundappa Report | 15.15 | 15.15 |
| 2 | 4702-00-101-9-04-422 Deveolpment of Tanks under Nanjundappa Report | 8.24 | 8.24 |
| 3 | 4702-00-101-9-04-423 Deveolpment of Tanks under Nanjundappa Report | 4.40 | 4.367 |
| 4 | 4702-00-101-1-14-132 Deveolpment of Tanks | 245.79 | 245.782 |
| 5 | 2702-01-052-0-00 Machinary & Eqripments | - | - |
| 6 | 2702-01-101-0-71 Deepning Of Wells And Construction Of Tanks Of -GP Schemes | - | - |
| 7 | 4702-00-102-1-01Ganga Kalyana Schemes -GP Schemes | - | - |
| | **TOTAL M.I.(P)** | **273.58** | **273.539** |

| ಅ.ನಂ | ಲೆಕ್ಕ ಶೀರ್ಷಿಕೆ | ಅನುದಾನ | ವೆಚ್ಚ |
|---|---|---|---|
| | **MINOR IRRIGATION-NON-PLAN** | | |
| 1 | 2702-00-101-0-26 Annual Maintenance & Repairs-ZP Schemes | 27.57 | 22.607 |
| 2 | 2702-00-101-0-28 NEW SUPPLY ZP Schemes | 3.47 | 3.467 |
| 3 | 2702-00-101-0-29 Survey works .ZP Schemes | 1.43 | 1.43 |
| | **TOTAL OF M.I. (NP)** | **32.47** | **27.504** |
| | **OTHER DEPARTMENTS** | | |
| 1 | 2202-00-102-0-34 Addition & Alteration | 21.00 | 19.386 |
| 2 | 2202-01-053-0-01 School Building (Rural/Town ) Repairs | - | - |
| 3 | 2202-02-053-0-01 Constructiion of DDPI& BEO Office Building | 40.00 | 39.783 |
| | **Total Education Buildings** | **61.00** | **59.169** |
| 1 | 4235-02-102-1-01 R.I.D.F.-13 Nabard Anganawadi Building (Spl Grant) | - | - |
| 2 | 4235-02-102-1-01 R.I.D.F.-14 Nabard Anganawadi Building (Spl Grant) | - | - |
| 3 | 4235-02-102-1-02 Non Completed Anganwadi Building | 29.25 | - |
| 4 | 4235-02-102-1-02 Anganwadi Building (SCP) | - | - |
| 5 | 4235-02-102-1-01 Anganwadi Building (TSP) | - | - |
| 6 | 4235-02-102-1-02 R.I.D.F-15 Anganwadi Building (General) | - | - |
| 7 | 4235-02-102-1-02 R.I.D.F-15 Anganwadi Building (SCP) | - | - |
| 8 | 4235-02-102-1-01 R.I.D.F-15 Anganwadi Building (TSP) | - | - |
| 9 | 4235-02-102-1-02 R.I.D.F-16 Anganwadi Building (General) | - | - |
| 10 | 4235-02-102-1-02 R.I.D.F-16 Anganwadi Building (SCP) | - | - |
| 11 | 4403-00-101-0-02Nabard Animal Husbandary Building | - | - |
| 12 | 2210-03-110-0-06 Nabard Health Building | - | - |
| 13 | 3054-04-337-2-02 R.I.D.F. Nabard Roads | - | - |
| | **Total Nabarad Buildings** | **29.25** | **-** |
| 1 | 2225-00-103-0-40 Constuction & Maintenance Of Hostel Building of BCM Deparmant | 14.50 | 8.945 |
| 2 | 2225-01-277-0-61 Constuction & Maintenance of Social welfare for Department | - | - |
| | **Total Social WelfareDeparyment** | **14.50** | **8.945** |
| 1 | 2210-00-101-0-36 Maintenance of health build. | 11.75 | 11.683 |
| 2 | 2210-00-105-0-38 Ayuesh Bullding | - | - |
| 3 | 4210-00-101-0-39 Disti Health Building | - | - |
| | **Total Medical Building** | **11.75** | **11.683** |
| 1 | 2059-00-101-0-29 New supply | 5.27 | 4.838 |
| 2 | 2059-00-101-0-28 Maintenance and repairs | 51.24 | 48.199 |
| | **Total 2059 Non-Plan** | **56.51** | **53.037** |
| 12 | **OTHER DEPARTMENTS** | - | - |
| | 2401-00-119-4-71 Maintenance of Horticultural Farms | - | - |
| | 2435-00-101-0-32 Horticultural building | 12.50 | 12.498 |

| ಅ.ನಂ | ಲೆಕ್ಕ ಶೀರ್ಷಿಕೆ | ಅನುದಾನ | ವೆಚ್ಚ |
|---|---|---|---|
| | 2435-00-101-0-33 Agriculture office building | 2.70 | 2.681 |
| | 2403-00-101-0-28 Animal husbandary building | 25.00 | 24.998 |
| | 2405-00-101-0-27 Fisheries building | 2.812 | 2.811 |
| | **Total Other Departments** | **43.01** | **42.988** |
| 13 | 2515-00-001-0-02 Deposit Refund | 26.153 | 26.153 |
| | **Total 8443 Deposit Refund** | **26.153** | **26.153** |
| 14 | 2515-00-101-0-31-101 Deveolpment Grant to Z.P | 15.50 | 13.797 |
| **Total 2515 Deveolpment Grant to Z.P** | | **15.50** | **13.797** |
| 15 | 2515-00-101-0-31-101 ZP Member Fund | 99.95 | 94.036 |
| | **Total 2515-Z.P. Member Fund** | **99.95** | **94.036** |
| | **Others Department Grand Total:-** | **357.625** | **309.808** |
| | **All Head Grand Total:-** | **2,819.195** | **2,458.056** |

**ಕೈಪಿಡಿ:– 10:–** ಇಲಾಖೆಯಲ್ಲಿ ಸಹಾಯಧನ ನೀಡುವ ಕಾರ್ಯಕ್ರಮಗಳ ನಿರ್ವಹಣಾ ವಿವರ ಮತ್ತು ಅದಕ್ಕೆ ಒದಗಿಸುವ ಅನುದಾನ ಮತ್ತು ಫಲಾನುಭವಿಗಳ ವಿವರ. ------ ಖಾಲಿ ಇರುತ್ತದೆ----

**ಕೈಪಿಡಿ:– 11:–**_ಕಾರ್ಯಾಲಯದಿಂದ ನೀಡಲಾಗುವ ಲೈಸನ್ಸ್ ಪರ್ಮಿಟ ಇತ್ಯಾದಿಗಳು

ವಿಭಾಗ ಕಾರ್ಯಾಲಯವು 4ನೇ.ದರ್ಜೆ. ಗುತ್ತಿಗೆದಾರರ. ನೊಂದಣಿ ಪ್ರಾಧಿಕಾರವಿರುತ್ತದೆ. ಕೆ.ಪಿ.ಡ.ಬ್ಲ್ಯು.ಡಿ.ಕೋಡದಲ್ಲಿ ವಿಧಿಸಲಾದ ಷರತ್ತುಗಳನ್ನು ಪೂರೈಸಿರುವ ಅರ್ಜಿದಾರರ ಹೆಸರನ್ನು 4 ನೇ ದರ್ಜೆ ಗುತ್ತಿಗೆದಾರರೆಂದು ನೊಂದಾಯಿಸಿ ಈ ವಿಭಾಗದಿಂದ ನಿರ್ವಹಿಸಲಾಗುವ ಕಾಮಗಾರಿಗಳನ್ನು ನೊಂದಾಯಿತ ಗುತ್ತಿಗೆದಾರರಿಗೆ ವಹಿಸಲಾಗುವದು ಪ್ರಸಕ್ತ ಸರ್ಕಾರದ ಆದೇಶ ಸಂಖ್ಯೆ:– .ಪಿ.ಡ.ಬ್ಲ್ಯು.ಡಿ–195/ಸಿಆರ್.ಎಂ–91/ ಬೆಂಗಳೂರು ದಿನಾಂಕ:– 27–10–74 ರಲ್ಲಿ ವಿಧಿತವಾದ ಷರತ್ತಿಗನುಗುಣವಾಗಿನ 4 ನೇ ದರ್ಜೆ ಗುತ್ತಿಗೆದಾರರಾಗಿ ಹೆಸರನ್ನು ನೊಂದಾಯಿಸಿಕೊಳ್ಳಲಾಗುತ್ತಿದೆ.

**ಕೈಪಿಡಿ:– 12:–**_ಇಲಾಖೆಯಲ್ಲಿ ಸಾರ್ವಜನಿಕರಿಗೆ ಮಾಹಿತಿ ನೀಡಲು ಲಭ್ಯವಿರುವ ಸವಲತ್ತುಗಳು ಹಾಗೂ ಗ್ರಂಥಾಲಯ ವಾಚನಾಲಯಗಳ ವಿವರ.

ಈ ಕಾರ್ಯಾಲಯದಲ್ಲಿ ಯಾವುದೇ ಗ್ರಂಥಾಲಯ ವಾಚನಾಲಯಗಳು ಸಾರ್ವಜನಿಕರಿಗೆ ಲಭ್ಯವಿರುವದಿಲ್ಲಾ. ಸಾರ್ವಜನಿಕರಿಗೆ ಅವಶ್ಯವಿರುವ ಮಾಹಿತಿಯನ್ನು ಕಾರ್ಯಾಲಯದ ಕಚೇರಿ ವೇಳೆಯಲ್ಲಿ ಕೇಂದ್ರ. ಸ್ಥಾನಿಕ ಸಹಾಯಕ ಇಂಜಿನೀಯರರನ್ನು ಅಥವಾ ಸ್ವಂತ ಕಾರ್ಯನಿರ್ವಾಹಕ ಇಂಜಿನೀಯರರನ್ನು ಭೇಟಿ ಯಾಗಿ ಅಥವಾ ಅರ್ಜಿ ನೀಡಿ ಪಡೆಯಬಹುದಾಗಿದೆ. ಸಾರ್ವಜನಿಕ ವಿಚಾರಣೆಗಾಗಿ ಸಂಪರ್ಕಿಸಬೇಕಾದ ಈ ಕಾರ್ಯಾಲಯದ **ದೂರವಾಣಿ ಸಂಖ್ಯೆ:–** 08384/226381 **E.Mail:-** ee_zpedsirsi@yahoo.co.in

**ಕೈಪಿಡಿ:– 13:–**___ವಿಭಾಗದಲ್ಲಿನ ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹಾಗೂ ಮೇಲ್ಮನವಿ ಪ್ರಾಧಿಕಾರದ ಹೆಸರು ಪದನಾಮ,ವಿಳಾಸ ದೂರವಾಣಿ ಸಂಖ್ಯೆ ಇತ್ಯಾದಿ ವಿವರಗಳು

| ಕ್ರ.ಸಂ | ಕಚೇರಿ ಮತ್ತು ದೂರವಾಣಿ | ಸಾರ್ವಜನಿಕ ಮಾಹಿತಿ ನೀಡುವ ಅಧಿಕಾರಿ ಸೆಕ್ಷನ್–5 (1) | ಸಹಾಯಕ ಸಾರ್ವಜನಿಕ ಮಾಹಿತಿ ನೀಡುವ ಅಧಿಕಾರಿ ಸೆಕ್ಷನ್–5 (2) | ಮೇಲ್ಮನವಿ ಪ್ರಾಧಿಕಾರ ಸೆಕ್ಷನ್–19(1) |
|---|---|---|---|---|
| | ಕಾ.ನಿ.ಇಂ.ರವರ ಕಾರ್ಯಾಲಯ ಕೋರ್ಟ ರಸ್ತೆ ಶಿರಸಿ (ಉ.ಕ ) 08384–226381 | ಶ್ರೀ ಗಿರೀಶ ಡಿ.ನಾಯ್ಕ, ಲೆಕ್ಕ ಪರಿಶೋಧನಾಧಿಕಾರಿ. ಪಂ.ರಾ.ಇಂ.ವಿಭಾಗ, ಶಿರಸಿ ಕಛೇರಿ –08384–226381 | ಶ್ರೀ ಎಂ.ಟಿ.ನಾಯ್ಕ, ದ್ವಿತೀಯ ದರ್ಜೆ ಸಹಾಯಕರು. ಕಛೇರಿ – 08384–226381 | ಶ್ರೀ ಎಂ ರೇವಣಸಿದ್ದಯ್ಯ (ಪ್ರಭಾರ) ಕಾರ್ಯನಿರ್ವಾಹಕ ಇಂಜಿನೀಯರ ಪಂ.ರಾ.ಇಂ ವಿಭಾಗ ಶಿರಸಿ. Office,08384/ 226381 |

**PR.84** ಕಾರ್ಯನಿರ್ವಾಹಕ ಇಂಜಿನೀಯರ್,

**SC.10** ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗ, ಶಿರಸಿ

## ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು

**ವಿಷಯ:** **ನಾಗಲಕ್ಷ್ಮಮ್ಮ** ರವರು **ಜಿಲ್ಲಾ ಪಂಚಾಯತಿ** ಸಾರ್ವತ್ರಿಕ ಚುನಾವಣೆ–2010 ರಲ್ಲಿ **ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಉತ್ತರ (ಅ) ತಾಲ್ಲೂಕಿನ 05–ಸೋಮಶೆಟ್ಟಹಳ್ಳಿ ಜಿಲ್ಲಾ ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸ್ಪರ್ಧಿಸಿ ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸದಿರುವುದರಿಂದ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಪ್ರಕಾರ ಅನರ್ಹಗೊಳಿಸುವ ಬಗ್ಗೆ.

**ಉಲ್ಲೇಖ:**
1. ಜಿಲ್ಲಾಧಿಕಾರಿಗಳು, **ಬೆಂಗಳೂರು ನಗರ** ಜಿಲ್ಲೆ ರವರ ಪತ್ರದ ಸಂಖ್ಯೆ: ಚುನಾ/ಜಿ/ತಾಪಂ/ಸಿಆರ್–01/10–11 ದಿನಾಂಕ: **18–08–2011**
2. ಆಯೋಗದ ನೋಟೀಸು ಸಂಖ್ಯೆ: ರಾಚುಆ/257/ಟಿಜಿಡ್‌ಪಿ/2011, ದಿನಾಂಕ: **06–09–2011**
3. ಜಿಲ್ಲಾಧಿಕಾರಿಗಳು, **ಬೆಂಗಳೂರು ನಗರ** ಜಿಲ್ಲೆ, ರವರ ಪತ್ರ ಸಂಖ್ಯೆ: **ಚುನಾ/ಜಿಪಂ/ತಾಪಂ/ಸಿಆರ್–01/10–11** ದಿನಾಂಕ: **25–06–2013**

**ಪ್ರಸ್ತಾವನೆ:**

**ಬೆಂಗಳೂರು ನಗರ ಜಿಲ್ಲಾ ಪಂಚಾಯತಿ** ಸದಸ್ಯ ಸ್ಥಾನಕ್ಕೆ **ಬೆಂಗಳೂರು ಉತ್ತರ ( ಅ) ತಾಲ್ಲೂಕಿನ 05–ಸೋಮಶೆಟ್ಟಹಳ್ಳಿ** ಜಿಲ್ಲಾ ಪಂಚಾಯತಿ ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2010ರಲ್ಲಿ ಸ್ಪರ್ಧಿಸಿದ್ದ (ಪ್ರಪತ್ರ–10 ರಂತೆ) **ನಾಗಲಕ್ಷ್ಮಮ್ಮ** ರವರು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308– ಬಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ನಿಯಮಗಳು 2005ರ ನಿಯಮ 2 ಮತ್ತು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 3 ರ ಪ್ರಕಾರ, ಚುನಾವಣಾ ವೆಚ್ಚಗಳ ಲೆಕ್ಕ ಪತ್ರವನ್ನು ನಿಗದಿತ ನಮೂನೆಯಲ್ಲಿ ಚುನಾವಣಾ ಫಲಿತಾಂಶ ಘೋಷಿತವಾದ 30 ದಿನಗಳೊಳಗೆ ಸಲ್ಲಿಸಿರುವುದಿಲ್ಲವೆಂದು **ಬೆಂಗಳೂರು ನಗರ** ಜಿಲ್ಲೆಯ ಜಿಲ್ಲಾಧಿಕಾರಿಗಳು ಉಲ್ಲೇಖ(1) ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 6 ರ ಉಪಖಂಡ 5ರನ್ವಯ ಆಯೋಗದಿಂದ ಉಲ್ಲೇಖ(2)ರ ದಿನಾಂಕ: **06–09–2011** ರ ನೋಟೀಸನ್ನು ನೀಡಿ ಅವರನ್ನು ಏಕೆ ಅನರ್ಹಗೊಳಿಸಬಾರದು ಎಂಬುದಕ್ಕೆ ನೋಟೀಸು ತಲುಪಿದ 15 ದಿನಗಳೊಳಗಾಗಿ ರಾಜ್ಯ ಚುನಾವಣಾ ಆಯೋಗಕ್ಕೆ ಕಾರಣಗಳನ್ನು ಸಲ್ಲಿಸತಕ್ಕದೆಂದು ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ದಿನಾಂಕ: **01–06–2013** ರಂದು **ನಾಗಲಕ್ಷ್ಮಮ್ಮ** ರವರಿಗೆ **ಜಾರಿ ಮಾಡಲು ಹೋದಾಗ ಸದರಿಯವರು ಗ್ರಾಮದಲ್ಲಿ ವಾಸವಿರುವುದಿಲ್ಲವೆಂಬ ಕಾರಣಕ್ಕಾಗಿ ಗ್ರಾಮಲೆಕ್ಕಿಗರು ಹಾಗೂ ಕಂದಾಯ ನಿರೀಕ್ಷಕರು ಸದರಿ ಗ್ರಾಮದ ಗ್ರಾಮಸ್ಥರ ಹೇಳಿಕೆ ಪಡೆದು ಮಹಜರ್ ಮಾಡಿರುವ ಪ್ರತಿಯನ್ನು ಜಿಲ್ಲಾಧಿಕಾರಿಗಳು** ಆಯೋಗಕ್ಕೆ ಕಳುಹಿಸಿರುತ್ತಾರೆ. ಈ ವಿಷಯದಲ್ಲಿ ಜಿಲ್ಲಾಧಿಕಾರಿಗಳು ಪರಿಶೀಲಿಸಿ ಅಂತಿಮವಾಗಿ ಉಲ್ಲೇಖ(3) ರ ವರದಿಯಲ್ಲಿಯೂ ಸಹ ಸದರಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸಿರುವುದಿಲ್ಲವೆಂದು ತಿಳಿಸಿ ನಿಯಮಾನುಸಾರ ಸದರಿಯವರನ್ನು ಅನರ್ಹಗೊಳಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಲಾಗಿ **ನಾಗಲಕ್ಷ್ಮಮ್ಮ** ರವರು ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸುವಲ್ಲಿ ವಿಫಲರಾಗಿದ್ದು, ಜಾರಿಯಾದ ನೋಟೀಸಿಗೆ ಸರಿಯಾದ ಕಾರಣ ಅಥವಾ ಸಮರ್ಥನೆಗಳನ್ನು ಒದಗಿಸಿಲ್ಲದಿರುವುದು ದೃಢಪಟ್ಟಿರುತ್ತದೆ. ಕಾರಣ ಈ ಕೆಳಕಂಡಂತೆ ಆದೇಶ.

**ಆದೇಶ ಸಂಖ್ಯೆ: ರಾಚುಆ/257(3)/ಟಿಜಡ್‌ಪಿ/2011, ಬೆಂಗಳೂರು ದಿನಾಂಕ: 05–12–2013**

ಮೇಲೆ ವಿವರಿಸಿರುವಂತೆ ಜಿಲ್ಲಾಧಿಕಾರಿಗಳ ವರದಿಯನ್ನು ಪರಿಶೀಲಿಸಿ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 306 ರ ಪ್ರಕಾರ ನೋಟೀಸನ್ನು ಜಾರಿ ಮಾಡಿದಾಗ್ಯೂ **ಬೆಂಗಳೂರು ನಗರ ಜಿಲ್ಲಾ ಪಂಚಾಯತಿ** ಸದಸ್ಯ ಸ್ಥಾನಕ್ಕೆ **ಬೆಂಗಳೂರು ಉತ್ತರ ( ಅ)** ತಾಲ್ಲೂಕಿನ **05–ಸೋಮಶೆಟ್ಟಹಳ್ಳಿ ಜಿಲ್ಲಾ ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2010ರಲ್ಲಿ ಸ್ಪರ್ಧಿಸಿದ್ದ **ನಾಗಲಕ್ಷ್ಮಮ್ಮ** ಇವರು ಆಯೋಗಕ್ಕೆ ವೆಚ್ಚದ ವಿವರಗಳನ್ನು ನೀಡುವಲ್ಲಿ ವಿಫಲರಾಗಿರುತ್ತಾರೆ ಹಾಗೂ ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆ ನೀಡಿಲ್ಲದಿರುವುದು ದೃಢಪಟ್ಟಿರುವುದರಿಂದ ರಾಜ್ಯ ಚುನಾವಣಾ ಆಯೋಗವು **ನಾಗಲಕ್ಷ್ಮಮ್ಮ** ರವರನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಅನುಸಾರ ಈ ಆದೇಶದ ದಿನಾಂಕದಿಂದ ಆರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿರುತ್ತದೆ.

**ಆಯುಕ್ತರು,**

**ರಾಜ್ಯ ಚುನಾವಣಾ ಆಯೋಗ.**

## ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು

**ವಿಷಯ:** **ಆರ್.ಸಂತೋಷ್ ಕುಮಾರ್** ರವರು **ಜಿಲ್ಲಾ ಪಂಚಾಯತಿ** ಸಾರ್ವತ್ರಿಕ ಚುನಾವಣೆ–2010 ರಲ್ಲಿ **ಬೆಂಗಳೂರು ನಗರ ಜಿಲ್ಲೆ, ಆನೇಕಲ್ ತಾಲ್ಲೂಕಿನ 30–ಇಂಡ್ಲವಾಡಿ ಜಿಲ್ಲಾ ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸ್ಪರ್ಧಿಸಿ ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸದಿರುವುದರಿಂದ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಪ್ರಕಾರ ಅನರ್ಹಗೊಳಿಸುವ ಬಗ್ಗೆ.

**ಉಲ್ಲೇಖ:**

1. ಜಿಲ್ಲಾಧಿಕಾರಿಗಳು, **ಬೆಂಗಳೂರು ನಗರ** ಜಿಲ್ಲೆ ರವರ ಪತ್ರದ ಸಂಖ್ಯೆ: ಚುನಾ/ಜಿ/ತಾಪಂ/ಸಿಆರ್–01/10–11 ದಿನಾಂಕ: **18–08–2011**
2. ಆಯೋಗದ ನೋಟೀಸು ಸಂಖ್ಯೆ: ರಾಚುಆ/257/ಟಿಜಡ್‌ಪಿ/2011, ದಿನಾಂಕ: **06–09–2011**
3. ಜಿಲ್ಲಾಧಿಕಾರಿಗಳು, **ಬೆಂಗಳೂರು ನಗರ** ಜಿಲ್ಲೆ, ರವರ ಪತ್ರ ಸಂಖ್ಯೆ: **ಚುನಾ/ಜಿಪಂ/ತಾಪಂ/ಸಿಆರ್–01/10–11** ದಿನಾಂಕ: **25–06–2013**

**ಪ್ರಸ್ತಾವನೆ:**

**ಬೆಂಗಳೂರು ನಗರ ಜಿಲ್ಲಾ ಪಂಚಾಯತಿ** ಸದಸ್ಯ ಸ್ಥಾನಕ್ಕೆ **ಆನೇಕಲ್ ತಾಲ್ಲೂಕಿನ 30–ಇಂಡ್ಲವಾಡಿ** ಜಿಲ್ಲಾ ಪಂಚಾಯತಿ ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2010ರಲ್ಲಿ ಸ್ಪರ್ಧಿಸಿದ್ದ (ಪ್ರಪತ್ರ–10 ರಂತೆ) **ಆರ್.ಸಂತೋಷ್ ಕುಮಾರ್** ರವರು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308– ಬಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ನಿಯಮಗಳು 2005ರ ನಿಯಮ 2 ಮತ್ತು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 3 ರ ಪ್ರಕಾರ, ಚುನಾವಣಾ ವೆಚ್ಚಗಳ ಲೆಕ್ಕ ಪತ್ರವನ್ನು ನಿಗದಿತ ನಮೂನೆಯಲ್ಲಿ ಚುನಾವಣಾ ಫಲಿತಾಂಶ ಘೋಷಿತವಾದ 30 ದಿನಗಳೊಳಗೆ ಸಲ್ಲಿಸಿರುವುದಿಲ್ಲವೆಂದು **ಬೆಂಗಳೂರು ನಗರ** ಜಿಲ್ಲೆಯ ಜಿಲ್ಲಾಧಿಕಾರಿಗಳು ಉಲ್ಲೇಖ(1) ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 6 ರ ಉಪಖಂಡ 5ರನ್ವಯ ಆಯೋಗದಿಂದ ಉಲ್ಲೇಖ(2)ರ ದಿನಾಂಕ: **06–09–2011** ರ ನೋಟೀಸನ್ನು ನೀಡಿ ಅವರನ್ನು ಏಕೆ ಅನರ್ಹಗೊಳಿಸಬಾರದು ಎಂಬುದಕ್ಕೆ ನೋಟೀಸು ತಲುಪಿದ 15 ದಿನಗಳೊಳಗಾಗಿ ರಾಜ್ಯ ಚುನಾವಣಾ ಆಯೋಗಕ್ಕೆ ಕಾರಣಗಳನ್ನು ಸಲ್ಲಿಸತಕ್ಕದೆಂದು ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ದಿನಾಂಕ: **26–01–2013** ರಂದು **ಆರ್.ಸಂತೋಷ್ ಕುಮಾರ್** ರವರಿಗೆ **ಗ್ರಾಮಲೆಕ್ಕಿಗರು ಜಾರಿ ಮಾಡಿದ್ದು,** ಜಿಲ್ಲಾಧಿಕಾರಿಗಳು ಜಾರಿಯಾದ ಪ್ರತಿಯನ್ನು ಆಯೋಗಕ್ಕೆ ಕಳುಹಿಸಿರುತ್ತಾರೆ. ಆದಾಗ್ಯೂ ಅಭ್ಯರ್ಥಿಯು ಆಯೋಗಕ್ಕೆ ಉತ್ತರವನ್ನು ನೀಡಿರುವುದಿಲ್ಲ. ಹಾಗೂ ಜಿಲ್ಲಾಧಿಕಾರಿಗಳು ಈ ವಿಷಯದಲ್ಲಿ ಪರಿಶೀಲಿಸಿ ಅಂತಿಮವಾಗಿ ಉಲ್ಲೇಖ(3) ರ ವರದಿಯಲ್ಲಿಯೂ ಸಹ ಸದರಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸಿರುವುದಿಲ್ಲವೆಂದು ತಿಳಿಸಿ ನಿಯಮಾನುಸಾರ ಸದರಿಯವರನ್ನು ಅನರ್ಹಗೊಳಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಲಾಗಿ **ಆರ್.ಸಂತೋಷ್ ಕುಮಾರ್** ರವರು ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸುವಲ್ಲಿ ವಿಫಲರಾಗಿದ್ದು, ಜಾರಿಯಾದ ನೋಟೀಸಿಗೆ ಸರಿಯಾದ ಕಾರಣ ಅಥವಾ ಸಮರ್ಥನೆಗಳನ್ನು ಒದಗಿಸಿಲ್ಲದಿರುವುದು ದೃಢಪಟ್ಟಿರುತ್ತದೆ. ಕಾರಣ ಈ ಕೆಳಕಂಡಂತೆ ಆದೇಶ.

**ಆದೇಶ ಸಂಖ್ಯೆ: ರಾಚುಆ/257(19)/ಟಿಜಡ್‌ಪಿ/2011, ಬೆಂಗಳೂರು ದಿನಾಂಕ: 05–12–2013**

ಮೇಲೆ ವಿವರಿಸಿರುವಂತೆ ಜಿಲ್ಲಾಧಿಕಾರಿಗಳ ವರದಿಯನ್ನು ಪರಿಶೀಲಿಸಿ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 306 ರ ಪ್ರಕಾರ ನೋಟೀಸನ್ನು ಜಾರಿ ಮಾಡಿದಾಗ್ಯೂ **ಬೆಂಗಳೂರು ನಗರ ಜಿಲ್ಲಾ ಪಂಚಾಯತಿ** ಸದಸ್ಯ ಸ್ಥಾನಕ್ಕೆ **ಆನೇಕಲ್** ತಾಲ್ಲೂಕಿನ **30–ಇಂಡ್ಲವಾಡಿ ಜಿಲ್ಲಾ ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2010ರಲ್ಲಿ ಸ್ಪರ್ಧಿಸಿದ್ದ **ಆರ್.ಸಂತೋಷ್ ಕುಮಾರ್** ಇವರು ಆಯೋಗಕ್ಕೆ ವೆಚ್ಚದ ವಿವರಗಳನ್ನು ನೀಡುವಲ್ಲಿ ವಿಫಲರಾಗಿರುತ್ತಾರೆ ಹಾಗೂ ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆ ನೀಡಿಲ್ಲದಿರುವುದು ದೃಢಪಟ್ಟಿರುವುದರಿಂದ ರಾಜ್ಯ ಚುನಾವಣಾ ಆಯೋಗವು **ಆರ್.ಸಂತೋಷ್ ಕುಮಾರ್** ರವರನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಅನುಸಾರ ಈ ಆದೇಶದ ದಿನಾಂಕದಿಂದ ಆರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿರುತ್ತದೆ.

**ಆಯುಕ್ತರು,**

**ರಾಜ್ಯ ಚುನಾವಣಾ ಆಯೋಗ.**

## ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು

**ವಿಷಯ:** **ಅಬಿದಾ ಬಾನು** ರವರು **ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕು ಪಂಚಾಯತಿ** ಸಾರ್ವತ್ರಿಕ ಚುನಾವಣೆ–2010 ರಲ್ಲಿ **ಉಡುಪಿ ತಾಲ್ಲೂಕು ಪಂಚಾಯತಿ, 35–ಮಲ್ಲಾರು** ಚುನಾವಣಾ ಕ್ಷೇತ್ರದಿಂದ ಸ್ಪರ್ಧಿಸಿ ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸದಿರುವುದರಿಂದ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಪ್ರಕಾರ ಅನರ್ಹಗೊಳಿಸುವ ಬಗ್ಗೆ.

**ಉಲ್ಲೇಖ:**
1. ಜಿಲ್ಲಾಧಿಕಾರಿಗಳು, **ಉಡುಪಿ** ಜಿಲ್ಲೆ ರವರ ಪತ್ರದ ಸಂಖ್ಯೆ: **ಇಎಲ್.ಎನ್(2).ಸಿಆರ್–118/10–11** ದಿನಾಂಕ: **20–03–2011**
2. ಆಯೋಗದ ನೋಟೀಸು ಸಂಖ್ಯೆ: ರಾಚುಆ/63/ಟಿಜಡ್‌ಪಿ/2011, ದಿನಾಂಕ: **13–07–2012**
3. ಜಿಲ್ಲಾಧಿಕಾರಿಗಳು, **ಉಡುಪಿ** ಜಿಲ್ಲೆ, ರವರ ಪತ್ರ ಸಂಖ್ಯೆ: **ಇಎಲ್.ಎನ್(2).ಸಿಆರ್–04/12–13** ದಿನಾಂಕ: **14–08–2013**

**ಪ್ರಸ್ತಾವನೆ:**

**ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕು ಪಂಚಾಯತಿ** ಸದಸ್ಯ ಸ್ಥಾನಕ್ಕೆ **35–ಮಲ್ಲಾರು** ತಾಲ್ಲೂಕು ಪಂಚಾಯತಿ ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2010ರಲ್ಲಿ ಸ್ಪರ್ಧಿಸಿದ್ದ (ಪ್ರಪತ್ರ–10 ರಂತೆ) **ಅಬಿದಾ ಬಾನು** ರವರು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308– ಬಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ನಿಯಮಗಳು 2005ರ ನಿಯಮ 2 ಮತ್ತು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 3 ರ ಪ್ರಕಾರ, ಚುನಾವಣಾ ವೆಚ್ಚಗಳ ಲೆಕ್ಕ ಪತ್ರವನ್ನು ನಿಗದಿತ ನಮೂನೆಯಲ್ಲಿ ಚುನಾವಣಾ ಫಲಿತಾಂಶ ಘೋಷಿತವಾದ 30 ದಿನಗಳೊಳಗೆ ಸಲ್ಲಿಸಿರುವುದಿಲ್ಲವೆಂದು **ಉಡುಪಿ** ಜಿಲ್ಲೆಯ ಜಿಲ್ಲಾಧಿಕಾರಿಗಳು ಉಲ್ಲೇಖ(1) ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 6 ರ ಉಪಖಂಡ 5ರನ್ವಯ ಆಯೋಗದಿಂದ ಉಲ್ಲೇಖ(2)ರ ದಿನಾಂಕ: **13–07–2012** ರ ನೋಟೀಸನ್ನು ನೀಡಿ ಅವರನ್ನು ಏಕೆ ಅನರ್ಹಗೊಳಿಸಬಾರದು ಎಂಬುದಕ್ಕೆ ನೋಟೀಸು ತಲುಪಿದ 15 ದಿನಗಳೊಳಗಾಗಿ ರಾಜ್ಯ ಚುನಾವಣಾ ಆಯೋಗಕ್ಕೆ ಕಾರಣಗಳನ್ನು ಸಲ್ಲಿಸತಕ್ಕದೆಂದು ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ದಿನಾಂಕ: **16–08–2012** ರಂದು **ಅಬಿದಾ ಬಾನು** ರವರಿಗೆ **ರಾಜಸ್ವ ನಿರೀಕ್ಷಕರು ಜಾರಿ ಮಾಡಿದ್ದು,** ಜಿಲ್ಲಾಧಿಕಾರಿಗಳು ಜಾರಿಯಾದ ಪ್ರತಿಯನ್ನು ಆಯೋಗಕ್ಕೆ ಕಳುಹಿಸಿರುತ್ತಾರೆ. ಆದಾಗ್ಯೂ ಅಭ್ಯರ್ಥಿಯು ಆಯೋಗಕ್ಕೆ ಉತ್ತರವನ್ನು ನೀಡಿರುವುದಿಲ್ಲ. ಹಾಗೂ ಜಿಲ್ಲಾಧಿಕಾರಿಗಳು ಈ ವಿಷಯದಲ್ಲಿ ಪರಿಶೀಲಿಸಿ ಅಂತಿಮವಾಗಿ ಉಲ್ಲೇಖ(3) ರ ವರದಿಯಲ್ಲಿಯೂ ಸಹ ಸದರಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸಿರುವುದಿಲ್ಲವೆಂದು ತಿಳಿಸಿ ನಿಯಮಾನುಸಾರ ಸದರಿಯವರನ್ನು ಅನರ್ಹಗೊಳಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಲಾಗಿ **ಅಬಿದಾ ಬಾನು** ರವರು ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸುವಲ್ಲಿ ವಿಫಲರಾಗಿದ್ದು, ಜಾರಿಯಾದ ನೋಟೀಸಿಗೆ ಸರಿಯಾದ ಕಾರಣ ಅಥವಾ ಸಮರ್ಥನೆಗಳನ್ನು ಒದಗಿಸಿಲ್ಲದಿರುವುದು ದೃಢಪಟ್ಟಿರುತ್ತದೆ. ಕಾರಣ ಈ ಕೆಳಕಂಡಂತೆ ಆದೇಶ.

**ಆದೇಶ ಸಂಖ್ಯೆ: ರಾಚುಆ/63(11)/ಟಿಜಡ್‌ಪಿ/2011, ಬೆಂಗಳೂರು ದಿನಾಂಕ: 05–12–2013**

ಮೇಲೆ ವಿವರಿಸಿರುವಂತೆ ಜಿಲ್ಲಾಧಿಕಾರಿಗಳ ವರದಿಯನ್ನು ಪರಿಶೀಲಿಸಿ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 306 ರ ಪ್ರಕಾರ ನೋಟೀಸನ್ನು ಜಾರಿಮಾಡಿದಾಗ್ಯೂ **ಉಡುಪಿ ಜಿಲ್ಲೆ ಉಡುಪಿ ತಾಲ್ಲೂಕು ಪಂಚಾಯತಿ** ಸದಸ್ಯ ಸ್ಥಾನಕ್ಕೆ **35–ಮಲ್ಲಾರು ತಾಲ್ಲೂಕು ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2010ರಲ್ಲಿ ಸ್ಪರ್ಧಿಸಿದ್ದ **ಅಬಿದಾ ಬಾನು** ಇವರು ಆಯೋಗಕ್ಕೆ ವೆಚ್ಚದ ವಿವರಗಳನ್ನು ನೀಡುವಲ್ಲಿ ವಿಫಲರಾಗಿರುತ್ತಾರೆ ಹಾಗೂ ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆ ನೀಡಿಲ್ಲದಿರುವುದು ದೃಢಪಟ್ಟಿರುವುದರಿಂದ ರಾಜ್ಯ ಚುನಾವಣಾ ಆಯೋಗವು **ಅಬಿದಾ ಬಾನು** ರವರನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಅನುಸಾರ ಈ ಆದೇಶದ ದಿನಾಂಕದಿಂದ ಆರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿರುತ್ತದೆ.

**ಆಯುಕ್ತರು,**

**ರಾಜ್ಯ ಚುನಾವಣಾ ಆಯೋಗ.**

## ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು

**ವಿಷಯ:** **ಶ್ರೀನಿವಾಸ್ ಟಿ.ಜೆ** ರವರು **ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ದಕ್ಷಿಣ ತಾಲ್ಲೂಕು ಪಂಚಾಯತಿ** ಸಾರ್ವತ್ರಿಕ ಚುನಾವಣೆ–2010 ರಲ್ಲಿ **ಬೆಂಗಳೂರು ದಕ್ಷಿಣ ತಾಲ್ಲೂಕು ಪಂಚಾಯತಿ, 01–ತಾವರೆಕೆರೆ** ಚುನಾವಣಾ ಕ್ಷೇತ್ರದಿಂದ ಸ್ಪರ್ಧಿಸಿ ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸದಿರುವುದರಿಂದ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಪ್ರಕಾರ ಅನರ್ಹಗೊಳಿಸುವ ಬಗ್ಗೆ.

**ಉಲ್ಲೇಖ:**
1. ಜಿಲ್ಲಾಧಿಕಾರಿಗಳು, **ಬೆಂಗಳೂರು ನಗರ** ಜಿಲ್ಲೆ ರವರ ಪತ್ರದ ಸಂಖ್ಯೆ: **ಚುನಾ/ಜಿ/ತಾಪಂ/ಸಿಆರ್–01/10–11** ದಿನಾಂಕ: **18–08–2011**
2. ಆಯೋಗದ ನೋಟೀಸು ಸಂಖ್ಯೆ: ರಾಚುಆ/260/ಟಿಜಡ್‌ಪಿ/2011, ದಿನಾಂಕ: **07–09–2011**
3. ಜಿಲ್ಲಾಧಿಕಾರಿಗಳು, **ಬೆಂಗಳೂರು ನಗರ** ಜಿಲ್ಲೆ, ರವರ ಪತ್ರ ಸಂಖ್ಯೆ: **ಚುನಾ/ಜಿಪಂ/ತಾಪಂ/ಸಿಆರ್–01/10–11** ದಿನಾಂಕ: **03–09–2013**

**ಪ್ರಸ್ತಾವನೆ:**

**ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ದಕ್ಷಿಣ ತಾಲ್ಲೂಕು ಪಂಚಾಯತಿ** ಸದಸ್ಯ ಸ್ಥಾನಕ್ಕೆ **01–ತಾವರೆಕೆರೆ** ತಾಲ್ಲೂಕು ಪಂಚಾಯತಿ ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2010ರಲ್ಲಿ ಸ್ಪರ್ಧಿಸಿದ್ದ (ಪ್ರಪತ್ರ–10 ರಂತೆ) **ಶ್ರೀನಿವಾಸ್ ಟಿ.ಜೆ** ರವರು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308– ಬಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ನಿಯಮಗಳು 2005ರ ನಿಯಮ 2 ಮತ್ತು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 3 ರ ಪ್ರಕಾರ, ಚುನಾವಣಾ ವೆಚ್ಚಗಳ ಲೆಕ್ಕ ಪತ್ರವನ್ನು ನಿಗದಿತ ನಮೂನೆಯಲ್ಲಿ ಚುನಾವಣಾ ಫಲಿತಾಂಶ ಘೋಷಿತವಾದ 30 ದಿನಗಳೊಳಗೆ ಸಲ್ಲಿಸಿರುವುದಿಲ್ಲವೆಂದು **ಬೆಂಗಳೂರು ನಗರ** ಜಿಲ್ಲೆಯ ಜಿಲ್ಲಾಧಿಕಾರಿಗಳು ಉಲ್ಲೇಖ(1) ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 6 ರ ಉಪಖಂಡ 5ರನ್ವಯ ಆಯೋಗದಿಂದ ಉಲ್ಲೇಖ(2)ರ ದಿನಾಂಕ: **07–09–2011** ರ ನೋಟೀಸನ್ನು ನೀಡಿ ಅವರನ್ನು ಏಕೆ ಅನರ್ಹಗೊಳಿಸಬಾರದು ಎಂಬುದಕ್ಕೆ ನೋಟೀಸು ತಲುಪಿದ 15 ದಿನಗಳೊಳಗಾಗಿ ರಾಜ್ಯ ಚುನಾವಣಾ ಆಯೋಗಕ್ಕೆ ಕಾರಣಗಳನ್ನು ಸಲ್ಲಿಸತಕ್ಕದೆಂದು ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ದಿನಾಂಕ: **21–06–2013** ರಂದು **ಶ್ರೀನಿವಾಸ್ ಟಿ.ಜೆ** ರವರಿಗೆ **ರಾಜಸ್ವ ನಿರೀಕ್ಷಕರು ಜಾರಿ ಮಾಡಿದ್ದು,** ಜಿಲ್ಲಾಧಿಕಾರಿಗಳು ಜಾರಿಯಾದ ಪ್ರತಿಯನ್ನು ಆಯೋಗಕ್ಕೆ ಕಳುಹಿಸಿರುತ್ತಾರೆ. ಆದಾಗ್ಯೂ ಅಭ್ಯರ್ಥಿಯು ಆಯೋಗಕ್ಕೆ ಉತ್ತರವನ್ನು ನೀಡಿರುವುದಿಲ್ಲ. ಹಾಗೂ ಜಿಲ್ಲಾಧಿಕಾರಿಗಳು ಈ ವಿಷಯದಲ್ಲಿ ಪರಿಶೀಲಿಸಿ ಅಂತಿಮವಾಗಿ ಉಲ್ಲೇಖ(3) ರ ವರದಿಯಲ್ಲಿಯೂ ಸಹ ಸದರಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸಿರುವುದಿಲ್ಲವೆಂದು ತಿಳಿಸಿ ನಿಯಮಾನುಸಾರ ಸದರಿಯವರನ್ನು ಅನರ್ಹಗೊಳಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಲಾಗಿ **ಶ್ರೀನಿವಾಸ್ ಟಿ.ಜೆ** ರವರು ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸುವಲ್ಲಿ ವಿಫಲರಾಗಿದ್ದು, ಜಾರಿಯಾದ ನೋಟೀಸಿಗೆ ಸರಿಯಾದ ಕಾರಣ ಅಥವಾ ಸಮರ್ಥನೆಗಳನ್ನು ಒದಗಿಸಿಲ್ಲದಿರುವುದು ದೃಢಪಟ್ಟಿರುತ್ತದೆ. ಕಾರಣ ಈ ಕೆಳಕಂಡಂತೆ ಆದೇಶ.

**ಆದೇಶ ಸಂಖ್ಯೆ: ರಾಚುಆ/260(14)/ಟಿಜಡ್‌ಪಿ/2011, ಬೆಂಗಳೂರು ದಿನಾಂಕ: 05–12–2013**

ಮೇಲೆ ವಿವರಿಸಿರುವಂತೆ ಜಿಲ್ಲಾಧಿಕಾರಿಗಳ ವರದಿಯನ್ನು ಪರಿಶೀಲಿಸಿ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 306 ರ ಪ್ರಕಾರ ನೋಟೀಸನ್ನು ಜಾರಿಮಾಡಿದಾಗ್ಯೂ **ಬೆಂಗಳೂರು ನಗರ ಜಿಲ್ಲೆ ಬೆಂಗಳೂರು ದಕ್ಷಿಣ ತಾಲ್ಲೂಕು ಪಂಚಾಯತಿ** ಸದಸ್ಯ ಸ್ಥಾನಕ್ಕೆ **01–ತಾವರೆಕೆರೆ ತಾಲ್ಲೂಕು ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2010ರಲ್ಲಿ ಸ್ಪರ್ಧಿಸಿದ್ದ **ಶ್ರೀನಿವಾಸ್ ಟಿ.ಜೆ** ಇವರು ಆಯೋಗಕ್ಕೆ ವೆಚ್ಚದ ವಿವರಗಳನ್ನು ನೀಡುವಲ್ಲಿ ವಿಫಲರಾಗಿರುತ್ತಾರೆ ಹಾಗೂ ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆ

ನೀಡಿಲ್ಲದಿರುವುದು ದೃಢಪಟ್ಟಿರುವುದರಿಂದ ರಾಜ್ಯ ಚುನಾವಣಾ ಆಯೋಗವು **ಶ್ರೀನಿವಾಸ್ ಟಿ.ಜೆ** ರವರನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಅನುಸಾರ ಈ ಆದೇಶದ ದಿನಾಂಕದಿಂದ ಆರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿರುತ್ತದೆ.

**ಆಯುಕ್ತರು,**

**ರಾಜ್ಯ ಚುನಾವಣಾ ಆಯೋಗ.**

## ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು

ವಿಷಯ: **ನಾಗಮ್ಮ ಎಮ್. ವೆಂಕಟೇಶ್** ರವರು **ಚಿಕ್ಕಬಳ್ಳಾಪುರ ಜಿಲ್ಲೆ, ಗೌರಿಬಿದನೂರು ತಾಲ್ಲೂಕು ಪಂಚಾಯತಿ** ಸಾರ್ವತ್ರಿಕ ಚುನಾವಣೆ–2010 ರಲ್ಲಿ **ಗೌರಿಬಿದನೂರು ತಾಲ್ಲೂಕು ಪಂಚಾಯತಿ, 16–ಮೇಳ್ಯಾ** ಚುನಾವಣಾ ಕ್ಷೇತ್ರದಿಂದ ಸ್ಪರ್ಧಿಸಿ ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸದಿರುವುದರಿಂದ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಪ್ರಕಾರ ಅನರ್ಹಗೊಳಿಸುವ ಬಗ್ಗೆ.

ಉಲ್ಲೇಖ:
1. ಜಿಲ್ಲಾಧಿಕಾರಿಗಳು, **ಚಿಕ್ಕಬಳ್ಳಾಪುರ** ಜಿಲ್ಲೆ ರವರ ಪತ್ರದ ಸಂಖ್ಯೆ: ಇಎಲ್‌ಎನ್.ಸಿಆರ್ 64/**10–11** ದಿನಾಂಕ: **20–06–2011**
2. ಆಯೋಗದ ನೋಟೀಸು ಸಂಖ್ಯೆ: ರಾಚುಆ/147/ಟಿಜಡ್‌ಪಿ/2011, ದಿನಾಂಕ: **25–07–2011**
3. ಜಿಲ್ಲಾಧಿಕಾರಿಗಳು, **ಚಿಕ್ಕಬಳ್ಳಾಪುರ** ಜಿಲ್ಲೆ, ರವರ ಪತ್ರ ಸಂಖ್ಯೆ: ಇಎಲ್‌ಎನ್.ಸಿಆರ್ 64/**11–12** ದಿನಾಂಕ: **15–05–2012, 25–07–2013.**

ಪ್ರಸ್ತಾವನೆ:

**ಚಿಕ್ಕಬಳ್ಳಾಪುರ ಜಿಲ್ಲೆ, ಗೌರಿಬಿದನೂರು ತಾಲ್ಲೂಕು ಪಂಚಾಯತಿ** ಸದಸ್ಯ ಸ್ಥಾನಕ್ಕೆ **16–ಮೇಳ್ಯಾ** ತಾಲ್ಲೂಕು ಪಂಚಾಯತಿ ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2010ರಲ್ಲಿ ಸ್ಪರ್ಧಿಸಿದ್ದ (ಪ್ರಪತ್ರ–10 ರಂತೆ) **ನಾಗಮ್ಮ ಎಮ್. ವೆಂಕಟೇಶ್** ರವರು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308– ಬಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ನಿಯಮಗಳು 2005ರ ನಿಯಮ 2 ಮತ್ತು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 3 ರ ಪ್ರಕಾರ, ಚುನಾವಣಾ ವೆಚ್ಚಗಳ ಲೆಕ್ಕ ಪತ್ರವನ್ನು ನಿಗದಿತ ನಮೂನೆಯಲ್ಲಿ ಚುನಾವಣಾ ಫಲಿತಾಂಶ ಘೋಷಿತವಾದ 30 ದಿನಗಳೊಳಗೆ ಸಲ್ಲಿಸಿರುವುದಿಲ್ಲವೆಂದು **ಚಿಕ್ಕಬಳ್ಳಾಪುರ** ಜಿಲ್ಲೆಯ ಜಿಲ್ಲಾಧಿಕಾರಿಗಳು ಉಲ್ಲೇಖ(1) ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 6 ರ ಉಪಖಂಡ 5ರನ್ವಯ ಆಯೋಗದಿಂದ ಉಲ್ಲೇಖ(2)ರ ದಿನಾಂಕ: **25–07–2011** ರ ನೋಟೀಸನ್ನು ನೀಡಿ ಅವರನ್ನು ಏಕೆ ಅನರ್ಹಗೊಳಿಸಬಾರದು ಎಂಬುದಕ್ಕೆ ನೋಟೀಸು ತಲುಪಿದ 15 ದಿನಗಳೊಳಗಾಗಿ ರಾಜ್ಯ ಚುನಾವಣಾ ಆಯೋಗಕ್ಕೆ ಕಾರಣಗಳನ್ನು ಸಲ್ಲಿಸತಕ್ಕದೆಂದು ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ದಿನಾಂಕ: **18–08–2011** ರಂದು **ನಾಗಮ್ಮ ಎಮ್. ವೆಂಕಟೇಶ್** ರವರಿಗೆ **ರಾಜಸ್ವ ನಿರೀಕ್ಷಕರು ಜಾರಿ ಮಾಡಿದ್ದು,** ಜಿಲ್ಲಾಧಿಕಾರಿಗಳು ಜಾರಿಯಾದ ಪ್ರತಿಯನ್ನು ಆಯೋಗಕ್ಕೆ ಕಳುಹಿಸಿರುತ್ತಾರೆ. ಆದಾಗ್ಯೂ ಅಭ್ಯರ್ಥಿಯು ಆಯೋಗಕ್ಕೆ ಉತ್ತರವನ್ನು ನೀಡಿರುವುದಿಲ್ಲ. ಹಾಗೂ ಜಿಲ್ಲಾಧಿಕಾರಿಗಳು ಈ ವಿಷಯದಲ್ಲಿ ಪರಿಶೀಲಿಸಿ ಅಂತಿಮವಾಗಿ ಉಲ್ಲೇಖ(3) ರ ವರದಿಯಲ್ಲಿಯೂ ಸಹ ಸದರಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸಿರುವುದಿಲ್ಲವೆಂದು ತಿಳಿಸಿ ನಿಯಮಾನುಸಾರ ಸದರಿಯವರನ್ನು ಅನರ್ಹಗೊಳಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಲಾಗಿ **ನಾಗಮ್ಮ ಎಮ್. ವೆಂಕಟೇಶ್** ರವರು ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸುವಲ್ಲಿ ವಿಫಲರಾಗಿದ್ದು, ಜಾರಿಯಾದ ನೋಟೀಸಿಗೆ ಸರಿಯಾದ ಕಾರಣ ಅಥವಾ ಸಮರ್ಥನೆಗಳನ್ನು ಒದಗಿಸಿಲ್ಲದಿರುವುದು ದೃಢಪಟ್ಟಿರುತ್ತದೆ. ಕಾರಣ ಈ ಕೆಳಕಂಡಂತೆ ಆದೇಶ.

**ಆದೇಶ ಸಂಖ್ಯೆ: ರಾಚುಆ/147(27)/ಟಿಜಡ್‌ಪಿ/2011, ಬೆಂಗಳೂರು ದಿನಾಂಕ: 05–12–2013**

ಮೇಲೆ ವಿವರಿಸಿರುವಂತೆ ಜಿಲ್ಲಾಧಿಕಾರಿಗಳ ವರದಿಯನ್ನು ಪರಿಶೀಲಿಸಿ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 306 ರ ಪ್ರಕಾರ ನೋಟೀಸನ್ನು ಜಾರಿಮಾಡಿದಾಗ್ಯೂ **ಚಿಕ್ಕಬಳ್ಳಾಪುರ ಜಿಲ್ಲೆ, ಗೌರಿಬಿದನೂರು ತಾಲ್ಲೂಕು ಪಂಚಾಯತಿ** ಸದಸ್ಯ ಸ್ಥಾನಕ್ಕೆ **16–ಮೇಳ್ಯಾ ತಾಲ್ಲೂಕು ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2010ರಲ್ಲಿ ಸ್ಪರ್ಧಿಸಿದ್ದ **ನಾಗಮ್ಮ ಎಮ್. ವೆಂಕಟೇಶ್** ಇವರು ಆಯೋಗಕ್ಕೆ ವೆಚ್ಚದ ವಿವರಗಳನ್ನು ನೀಡುವಲ್ಲಿ ವಿಫಲರಾಗಿರುತ್ತಾರೆ ಹಾಗೂ ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆ ನೀಡಿಲ್ಲದಿರುವುದು ದೃಢಪಟ್ಟಿರುವುದರಿಂದ ರಾಜ್ಯ ಚುನಾವಣಾ ಆಯೋಗವು **ನಾಗಮ್ಮ ಎಮ್. ವೆಂಕಟೇಶ್** ರವರನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಸಿ ಅನುಸಾರ ಈ ಆದೇಶದ ದಿನಾಂಕದಿಂದ ಆರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿರುತ್ತದೆ.

**PR.104**
**SC.10**

**ಆಯುಕ್ತರು,**

**ರಾಜ್ಯ ಚುನಾವಣಾ ಆಯೋಗ.**

**ಕಂದಾಯ ಸಚಿವಾಲಯ**

**ಸಂಖ್ಯೆ: ಆರ್‌ಡಿ 328 ಎಲ್‌ಜಿಬಿ 2012, ಬೆಂಗಳೂರು, ದಿನಾಂಕ: 13.11.2013**

**ಅಧಿಸೂಚನೆ–1**

**ನಮೂನೆ–27**

**ಕರ್ನಾಟಕ ಭೂಕಂದಾಯ ಕಾಯ್ದೆ 1964ರ ಕಲಂ 68(1)**

**ಹಾಗೂ ಕರ್ನಾಟಕ ಭೂಕಂದಾಯ ನಿಯಮ 1966 ರ ನಿಯಮ 94 ರ ಮೇರೆಗಿನ ಘೋಷಣೆ**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ರಾಮನಗರ ಜಿಲ್ಲೆ, ರಾಮನಗರ ತಾಲ್ಲೂಕು, ಕಸಬಾ ಹೋಬಳಿ, ಬೋಳಪ್ಪನಹಳ್ಳಿ ಕೆರೆ ರೀ ಸ.ನಂ.119, 120 ಮತ್ತು ಜೀಗೇನಹಳ್ಳಿ ಗ್ರಾಮದ ರೀ ಸ.ನಂ. 27, 28 ಮತ್ತು 29ರ ಮಧ್ಯೆ ಇರುವು 0–16 ಗುಂಟೆ ಹಳ್ಳದ ಖರಾಬು (ಹದ್ದುಹಿಡಿದ) ಜಮೀನನ್ನು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡು ಬಂದಿರುವುದರಿಂದ, ಕರ್ನಾಟಕ ಭೂಕಂದಾಯ ಕಾಯ್ದೆ 1964 ರ 68ನೇ ಪ್ರಕರಣದ (1)ನೇ ಉಪ–ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ಜಮೀನಿನ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಈ ಜಮೀನಿನ ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಉದ್ದೇಶಿಸಿ, ಈ ಮೂಲಕ ಘೋಷಿಸುತ್ತದೆ.

ಸಾರ್ವಜನಿಕ ಹಿತಾಸಕ್ತಿ ಹಕ್ಕಿನ ಜೊತೆಗೆ ಸದರಿ ಭಾಗವು ಸದರಿ ಭಾಗದಲ್ಲೇ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರೆ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಸಾರ್ವಜನಿಕನು ಅಥವಾ ವ್ಯಕ್ತಿಯು ಈ ಅಧಿಸೂಚನೆಯನ್ನು ಹೊರಡಿಸಿದ ತೊಂಬತ್ತು (90) ದಿನಗಳೊಳಗೆ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು ಅಂತಹ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂತಹ ಹಿತಾಸಕ್ತಿ ಅಥವಾ ಹೆಚ್ಚಿನ ಬಗ್ಗೆ ನಷ್ಟ ಪರಿಹಾರಕ್ಕಾಗಿ ಕ್ಲೈಮ್ ಮಾಡಲಾದ ಮೊಬಲಗು ಮತ್ತು ವಿವರಗಳನ್ನು ಜಿಲ್ಲೆಯ ಡೆಪ್ಯೂಟಿ ಕಮಿಷನರಿಗೆ ಬರಹದಲ್ಲಿ ತಿಳಿಸತಕ್ಕದ್ದು ಮತ್ತು ಸದರಿ ಆಕ್ಷೇಪಣೆಗಳನ್ನು ಮತ್ತು ಕ್ಲೈಮ್‌ಗಳನ್ನು ಸದರಿ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಡೆಪ್ಯೂಟಿ ಕಮಿಷನರ್ ಪರಿಶೀಲಿಸತಕ್ಕದ್ದು.

**ಅನುಸೂಚಿ**

| | |
|---|---|
| ಜಮೀನು ಇರುವ ಗ್ರಾಮ | ಬೋಳಪ್ಪನಹಳ್ಳಿ ಕೆರೆ ಮತ್ತು ಜೀಗೇನಹಳ್ಳಿ |
| ತಾಲ್ಲೂಕು | ರಾಮನಗರ |
| ಜಿಲ್ಲೆ | ರಾಮನಗರ |
| ಸರ್ವೆ ನಂಬರ್ | ಬೋಳಪ್ಪನಹಳ್ಳಿ ಕೆರೆ ರೀ ಸ.ನಂ.119, 120 ಮತ್ತು ಜೀಗೇನಹಳ್ಳಿ ಗ್ರಾಮದ ರೀ ಸ.ನಂ. 27, 28 ಮತ್ತು 29ರ ಮಧ್ಯೆ |
| ಸದರಿ ಜಮೀನಿನ ವರ್ಣನೆ ಹಾಗೂ ಸರಿಸುಮಾರು ವಿಸ್ತೀರ್ಣ | ಹದ್ದು ಹಿಡಿದ ಹಳ್ಳದ ಖರಾಬು 0–16 ಗುಂಟೆ |
| ಮೇರೆಗಳು | ಪೂರ್ವಕ್ಕೆ: ಜೀಗೇನಹಳ್ಳಿ ಸ.ನಂ.29, 28, 27<br>ಪಶ್ಚಿಮಕ್ಕೆ: ಬೋಳಪ್ಪನಹಳ್ಳಿ ಸ.ನಂ.120<br>ಉತ್ತರಕ್ಕೆ: ಓಣಿ<br>ದಕ್ಷಿಣಕ್ಕೆ: ಉಳಿಕೆ ಸ್ವತ್ತು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಉಮಾದೇವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಮಂಜೂರಾತಿ–1)

PR.133

Sc.25

**ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳ ಕಾರ್ಯಾಲಯ ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ**

**ಪ್ರಪತ್ರ–2**

[12(2)ನೇ ನಿಯಮವನ್ನು ನೋಡಿ]

**ಅಧಿಸೂಚನೆ**

**ಸಂಖ್ಯೆ: ಇಎಲ್‌ಎನ್(2)/ಸಿಆರ್.38(ಗು)/2013–14, ದಿನಾಂಕ: 12/02/2014**

ಚಿಕ್ಕಬಳ್ಳಾಪುರ ಜಿಲ್ಲೆ, **ಗುಡಿಬಂಡೆ ತಾಲ್ಲೂಕಿನ** ವ್ಯಾಪ್ತಿಯ ಲಗತ್ತು ಅನುಬಂಧದಲ್ಲಿ ಕಂಡ ಗ್ರಾಮ ಪಂಚಾಯಿತಿಯ ಚುನಾಯಿತ ಸದಸ್ಯರ ಸ್ಥಾನವು ವಿವಿಧ ಕಾರಣಗಳಿಂದ ತೆರವಾಗಿದ್ದು, ಇದನ್ನು ಭರ್ತಿ ಮಾಡಲು ಚುನಾವಣೆ ನಡೆಸಬೇಕಾಗಿರುವುದರಿಂದ:

ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆ ನಡೆಸುವ) ನಿಯಮಗಳು, 1993ರ 12(2)ನೇ ನಿಯಮಕ್ಕನುಸಾರವಾಗಿ **ಡಾ|| ವಿಶಾಲ್.ಆರ್, ಭಾ.ಆ.ಸೇ, ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ** ಆದ ನಾನು ಸದರಿ ಚುನಾವಣೆಗೆ ಸಂಬಂಧಿಸಿದಂತೆ ಈ ಕೆಳಕಂಡ ಕಾರ್ಯಕ್ರಮದ ವೇಳಾಪಟ್ಟಿಯನ್ನು ಈ ಮೂಲಕ ನಿಗದಿಪಡಿಸಿದ್ದೇನೆ.

| ಕ್ರ. ಸಂ. | ಚುನಾವಣಾ ಚಟುವಟಿಕೆ | ದಿನಾಂಕ |
|---|---|---|
| 1. | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 19/02/2014 ಬುಧವಾರ |
| 2. | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 20/02/2014 ಗುರುವಾರ |
| 3. | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | 22/02/2014 ಶನಿವಾರ |
| 4. | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ | 02/03/2014 ಭಾನುವಾರ |
| 5. | ಮರು ಮತದಾನ ಅವಶ್ಯವಿದ್ದರೆ, ಮರು ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ | 04/03/2014 ಮಂಗಳವಾರ |
| 7. | ಮತಗಳ ಎಣಿಕೆ ಬೆಳಿಗ್ಗೆ 8.00 ಗಂಟೆಯಿಂದ (ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ) | 05/03/2014 ಬುಧವಾರ |
| 8. | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 05/03/2014 ಬುಧವಾರ |

**ಜಿಲ್ಲೆ: ಚಿಕ್ಕಬಳ್ಳಾಪುರ**

**ಅನುಬಂಧ**

**ಚಿಕ್ಕಬಳ್ಳಾಪುರ ಜಿಲ್ಲಾ ವ್ಯಾಪ್ತಿಯ ಗ್ರಾಮಪಂಚಾಯಿತಿಗಳಲ್ಲಿ ವಿವಿಧ ಕಾರಣಗಳಿಂದ ತೆರವಾಗಿರುವ ಸದಸ್ಯ ಸ್ಥಾನಗಳನ್ನು ತುಂಬಲು, ಚುನಾವಣೆ ನಡೆಸಬೇಕಾಗಿರುವ ಗ್ರಾಮಪಂಚಾಯಿತಿಗಳ ಹೆಸರು**

**ತಾಲ್ಲೂಕಿನ ಹೆಸರು: ಗುಡಿಬಂಡೆ**

| ಕ್ರ. ಸಂ. | ಗ್ರಾಮಪಂಚಾಯಿತಿ ಹೆಸರು | ತೆರವಾಗಿರುವ ಕ್ಷೇತ್ರದ ಹೆಸರು | ತೆರವಾಗಿರುವ ಸ್ಥಾನಗಳು | ಖಾಲಿ ಸ್ಥಾನದ ಮೀಸಲಾತಿ ವಿವರ |
|---|---|---|---|---|
| **1.** | ವರ್ಲಕೊಂಡ | ವರ್ಲಕೊಂಡ | 1 | ಹಿಂದುಳಿದ 'ಅ' ವರ್ಗ (ಮಹಿಳೆ) |

**ಡಾ॥ ವಿಶಾಲ್.ಆರ್, ಭಾ.ಆ.ಸೇ**

ಜಿಲ್ಲಾಧಿಕಾರಿಗಳು

ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳು, ಚಿಕ್ಕಬಳ್ಳಾಪರ ಜಿಲ್ಲೆ

**ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳ ಕಾರ್ಯಾಲಯ ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ**

**ಪ್ರಪತ್ರ–2**

**[12(2)ನೇ ನಿಯಮವನ್ನು ನೋಡಿ]**

**ಅಧಿಸೂಚನೆ**

**ಸಂಖ್ಯೆ: ಇಎಲ್ಎನ್(2)/ಸಿಆರ್.38(ಚಿಂ)/2013–14, ದಿನಾಂಕ: 12/02/2014**

ಚಿಕ್ಕಬಳ್ಳಾಪುರ ಜಿಲ್ಲೆ, **ಚಿಂತಾಮಣಿ ತಾಲ್ಲೂಕಿನ** ವ್ಯಾಪ್ತಿಯ ಲಗತ್ತು ಅನುಬಂಧದಲ್ಲಿ ಕಂಡ 3 ಗ್ರಾಮಪಂಚಾಯಿತಿಗಳ 3 ಚುನಾಯಿತ ಸದಸ್ಯರ ಸ್ಥಾನಗಳು ವಿವಿಧ ಕಾರಣಗಳಿಂದ ತೆರವಾಗಿದ್ದು, ಇವುಗಳನ್ನು ಭರ್ತಿ ಮಾಡಲು ಚುನಾವಣೆ ನಡೆಸಬೇಕಾಗಿರುವುದರಿಂದ:

ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆ ನಡೆಸುವ) ನಿಯಮಗಳು, 1993ರ 12(2)ನೇ ನಿಯಮಕ್ಕನುಸಾರವಾಗಿ **ಡಾ॥ ವಿಶಾಲ್.ಆರ್, ಭಾ.ಆ.ಸೇ, ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ** ಆದ ನಾನು ಸದರಿ ಚುನಾವಣೆಗೆ ಸಂಬಂಧಿಸಿದಂತೆ ಈ ಕೆಳಕಂಡ ಕಾರ್ಯಕ್ರಮದ ವೇಳಾಪಟ್ಟಿಯನ್ನು ಈ ಮೂಲಕ ನಿಗದಿಪಡಿಸಿದ್ದೇನೆ.

| ಕ್ರ. ಸಂ. | ಚುನಾವಣಾ ಚಟುವಟಿಕೆ | ದಿನಾಂಕ |
|---|---|---|
| 1. | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 19/02/2014 ಬುಧವಾರ |
| 2. | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 20/02/2014 ಗುರುವಾರ |
| 3. | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | 22/02/2014 ಶನಿವಾರ |
| 4. | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ | 02/03/2014 ಭಾನುವಾರ |
| 5. | ಮರು ಮತದಾನ ಅವಶ್ಯವಿದ್ದರೆ, ಮರು ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ | 04/03/2014 ಮಂಗಳವಾರ |
| 7. | ಮತಗಳ ಎಣಿಕೆ ಬೆಳಿಗ್ಗೆ 8.00 ಗಂಟೆಯಿಂದ (ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ) | 05/03/2014 ಬುಧವಾರ |
| 8. | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 05/03/2014 ಬುಧವಾರ |

ಜಿಲ್ಲೆ: ಚಿಕ್ಕಬಳ್ಳಾಪುರ

**ಅನುಬಂಧ**

**ಚಿಕ್ಕಬಳ್ಳಾಪುರ ಜಿಲ್ಲಾ ವ್ಯಾಪ್ತಿಯ ಗ್ರಾಮಪಂಚಾಯಿತಿಗಳಲ್ಲಿ ವಿವಿಧ ಕಾರಣಗಳಿಂದ ತೆರವಾಗಿರುವ ಸದಸ್ಯ ಸ್ಥಾನಗಳನ್ನು ತುಂಬಲು, ಚುನಾವಣೆ ನಡೆಸಬೇಕಾಗಿರುವ ಗ್ರಾಮಪಂಚಾಯಿತಿಗಳ ಹೆಸರು**

**ತಾಲ್ಲೂಕಿನ ಹೆಸರು: ಚಿಂತಾಮಣಿ**

| ಕ್ರ. ಸಂ. | ಗ್ರಾಮಪಂಚಾಯಿತಿ ಹೆಸರು | ತೆರವಾಗಿರುವ ಕ್ಷೇತ್ರದ ಹೆಸರು | ತೆರವಾಗಿರುವ ಸ್ಥಾನಗಳು | ಖಾಲಿ ಸ್ಥಾನದ ಮೀಸಲಾತಿ ವಿವರ |
|---|---|---|---|---|
| 1. | ಚಿನ್ನಸಂದ್ರ | ದೊಡ್ಡಹಳ್ಳಿ–04 | 1 | ಪರಿಶಿಷ್ಟ ಜಾತಿ |
| 2. | ನಂದಿಗಾನಹಳ್ಳಿ | ನಂದಿಗಾನಹಳ್ಳಿ–04 | 1 | ಹಿಂದುಳಿದ 'ಅ' ವರ್ಗ (ಮಹಿಳೆ) |
| 3. | ಪೆದ್ದೂರು | ಕೊರಕೋನಪಲ್ಲಿ–03 | 1 | ಪರಿಶಿಷ್ಟ ಪಂಗಡ |

**ಡಾ|| ವಿಶಾಲ್.ಆರ್, ಭಾ.ಆ.ಸೇ**

ಜಿಲ್ಲಾಧಿಕಾರಿಗಳು

ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳು, ಚಿಕ್ಕಬಳ್ಳಾಪರ ಜಿಲ್ಲೆ

**ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳ ಕಾರ್ಯಾಲಯ ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ**

**ಪ್ರಪತ್ರ–2**

[12(2)ನೇ ನಿಯಮವನ್ನು ನೋಡಿ]

**ಅಧಿಸೂಚನೆ**

**ಸಂಖ್ಯೆ: ಇಎಲ್‌ಎನ್(2)/ಸಿಆರ್.38(ಬಾ)/2013–14, ದಿನಾಂಕ: 12/02/2014**

ಚಿಕ್ಕಬಳ್ಳಾಪುರ ಜಿಲ್ಲೆ, **ಬಾಗೇಪಲ್ಲಿ ತಾಲ್ಲೂಕಿನ** ವ್ಯಾಪ್ತಿಯ ಲಗತ್ತು ಅನುಬಂಧದಲ್ಲಿ ಕಂಡ ಗ್ರಾಮಪಂಚಾಯಿತಿಯ ಚುನಾಯಿತ ಸದಸ್ಯರ ಸ್ಥಾನಗಳು ವಿವಿಧ ಕಾರಣಗಳಿಂದ ತೆರವಾಗಿದ್ದು, ಇವುಗಳನ್ನು ಭರ್ತಿ ಮಾಡಲು ಚುನಾವಣೆ ನಡೆಸಬೇಕಾಗಿರುವುದರಿಂದ:

ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆ ನಡೆಸುವ) ನಿಯಮಗಳು, 1993ರ 12(2)ನೇ ನಿಯಮಕ್ಕನುಸಾರವಾಗಿ **ಡಾ|| ವಿಶಾಲ್.ಆರ್, ಭಾ.ಆ.ಸೇ, ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ** ಆದ ನಾನು ಸದರಿ ಚುನಾವಣೆಗೆ ಸಂಬಂಧಿಸಿದಂತೆ ಈ ಕೆಳಕಂಡ ಕಾರ್ಯಕ್ರಮದ ವೇಳಾಪಟ್ಟಿಯನ್ನು ಈ ಮೂಲಕ ನಿಗದಿಪಡಿಸಿದ್ದೇನೆ.

| ಕ್ರ. ಸಂ. | ಚುನಾವಣಾ ಚಟುವಟಿಕೆ | ದಿನಾಂಕ |
|---|---|---|
| 1. | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 19/02/2014 ಬುಧವಾರ |
| 2. | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 20/02/2014 ಗುರುವಾರ |
| 3. | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | 22/02/2014 ಶನಿವಾರ |
| 4. | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ | 02/03/2014 ಭಾನುವಾರ |
| 5. | ಮರು ಮತದಾನ ಅವಶ್ಯವಿದ್ದರೆ, ಮರು ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ | 04/03/2014 ಮಂಗಳವಾರ |
| 7. | ಮತಗಳ ಎಣಿಕೆ ಬೆಳಿಗ್ಗೆ 8.00 ಗಂಟೆಯಿಂದ (ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ) | 05/03/2014 ಬುಧವಾರ |
| 8. | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 05/03/2014 ಬುಧವಾರ |

ಜಿಲ್ಲೆ: ಚಿಕ್ಕಬಳ್ಳಾಪುರ

**ಅನುಬಂಧ**

**ಚಿಕ್ಕಬಳ್ಳಾಪುರ ಜಿಲ್ಲಾ ವ್ಯಾಪ್ತಿಯ ಗ್ರಾಮಪಂಚಾಯಿತಿಗಳಲ್ಲಿ ವಿವಿಧ ಕಾರಣಗಳಿಂದ ತೆರವಾಗಿರುವ ಸದಸ್ಯ ಸ್ಥಾನಗಳನ್ನು ತುಂಬಲು, ಚುನಾವಣೆ ನಡೆಸಬೇಕಾಗಿರುವ ಗ್ರಾಮಪಂಚಾಯಿತಿಗಳ ಹೆಸರು**

**ತಾಲ್ಲೂಕಿನ ಹೆಸರು: ಬಾಗೇಪಲ್ಲಿ**

| ಕ್ರ. ಸಂ. | ಗ್ರಾಮಪಂಚಾಯಿತಿ ಹೆಸರು | ತೆರವಾಗಿರುವ ಕ್ಷೇತ್ರದ ಹೆಸರು | ತೆರವಾಗಿರುವ ಸ್ಥಾನಗಳು | ಖಾಲಿ ಸ್ಥಾನದ ಮೀಸಲಾತಿ ವಿವರ |
|---|---|---|---|---|
| 1. | ಮಾರ್ಗಾನುಕುಂಟೆ | ಮಾರ್ಗಾನುಕುಂಟೆ–01 | 1 | ಪರಿಶಿಷ್ಟ ಪಂಗಡ |

**ಡಾ|| ವಿಶಾಲ್.ಆರ್, ಭಾ.ಆ.ಸೇ**

ಜಿಲ್ಲಾಧಿಕಾರಿಗಳು

ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳು, ಚಿಕ್ಕಬಳ್ಳಾಪರ ಜಿಲ್ಲೆ

## ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳ ಕಾರ್ಯಾಲಯ ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ

**ಪ್ರಪತ್ರ-2**

[12(2)ನೇ ನಿಯಮವನ್ನು ನೋಡಿ]

**ಅಧಿಸೂಚನೆ ಸಂಖ್ಯೆ: ಇಎಲ್‌ಎನ್(2)/ಸಿಆರ್.38(ಚಿ)/2013-14, ದಿನಾಂಕ: 12/02/2014**

ಚಿಕ್ಕಬಳ್ಳಾಪುರ ಜಿಲ್ಲೆ, **ಚಿಕ್ಕಬಳ್ಳಾಪುರ ತಾಲ್ಲೂಕಿನ** ವ್ಯಾಪ್ತಿಯ ಲಗತ್ತು ಅನುಬಂಧದಲ್ಲಿ ಕಂಡ 3 ಗ್ರಾಮಪಂಚಾಯಿತಿಯ 3 ಚುನಾಯಿತ ಸದಸ್ಯರ ಸ್ಥಾನವು ವಿವಿಧ ಕಾರಣಗಳಿಂದ ತೆರವಾಗಿದ್ದು, ಇದನ್ನು ಭರ್ತಿ ಮಾಡಲು ಚುನಾವಣೆ ನಡೆಸಬೇಕಾಗಿರುವುದರಿಂದ:

ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆ ನಡೆಸುವ) ನಿಯಮಗಳು, 1993ರ 12(2)ನೇ ನಿಯಮಕ್ಕನುಸಾರವಾಗಿ **ಡಾ॥ ವಿಶಾಲ್.ಆರ್, ಭಾ.ಆ.ಸೇ, ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ** ಆದ ನಾನು ಸದರಿ ಚುನಾವಣೆಗೆ ಸಂಬಂಧಿಸಿದಂತೆ ಈ ಕೆಳಕಂಡ ಕಾರ್ಯಕ್ರಮದ ವೇಳಾಪಟ್ಟಿಯನ್ನು ಈ ಮೂಲಕ ನಿಗದಿಪಡಿಸಿದ್ದೇನೆ.

| ಕ್ರ. ಸಂ. | ಚುನಾವಣಾ ಚಟುವಟಿಕೆ | ದಿನಾಂಕ |
|---|---|---|
| 1. | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 19/02/2014 ಬುಧವಾರ |
| 2. | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 20/02/2014 ಗುರುವಾರ |
| 3. | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | 22/02/2014 ಶನಿವಾರ |
| 4. | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ | 02/03/2014 ಭಾನುವಾರ |
| 5. | ಮರು ಮತದಾನ ಅವಶ್ಯವಿದ್ದರೆ, ಮರು ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ | 04/03/2014 ಮಂಗಳವಾರ |
| 7. | ಮತಗಳ ಎಣಿಕೆ ಬೆಳಿಗ್ಗೆ 8.00 ಗಂಟೆಯಿಂದ (ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ) | 05/03/2014 ಬುಧವಾರ |
| 8. | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 05/03/2014 ಬುಧವಾರ |

**ಜಿಲ್ಲೆ: ಚಿಕ್ಕಬಳ್ಳಾಪುರ**

**ಅನುಬಂಧ**

**ಚಿಕ್ಕಬಳ್ಳಾಪುರ ಜಿಲ್ಲಾ ವ್ಯಾಪ್ತಿಯ ಗ್ರಾಮಪಂಚಾಯಿತಿಗಳಲ್ಲಿ ವಿವಿಧ ಕಾರಣಗಳಿಂದ ತೆರವಾಗಿರುವ ಸದಸ್ಯ ಸ್ಥಾನಗಳನ್ನು ತುಂಬಲು, ಚುನಾವಣೆ ನಡೆಸಬೇಕಾಗಿರುವ ಗ್ರಾಮಪಂಚಾಯಿತಿಗಳ ಹೆಸರು**

**ತಾಲ್ಲೂಕಿನ ಹೆಸರು: ಚಿಕ್ಕಬಳ್ಳಾಪುರ**

| ಕ್ರ. ಸಂ. | ಗ್ರಾಮಪಂಚಾಯಿತಿ ಹೆಸರು | ತೆರವಾಗಿರುವ ಕ್ಷೇತ್ರದ ಹೆಸರು | ತೆರವಾಗಿರುವ ಸ್ಥಾನಗಳು | ಖಾಲಿ ಸ್ಥಾನದ ಮೀಸಲಾತಿ ವಿವರ |
|---|---|---|---|---|
| **1.** | ಹಾರೋಬಂಡೆ | ಹಾರೋಬಂಡೆ | 1 | ಹಿಂದುಳಿದ 'ಅ' ವರ್ಗ (ಮಹಿಳೆ) |
| **2.** | ಅರೂರು | ಮುತ್ತುಕದಹಳ್ಳಿ | **1** | ಹಿಂದುಳಿದ 'ಅ' ವರ್ಗ (ಮಹಿಳೆ) |
| **3.** | ಪೋಶೆಟ್ಟಹಳ್ಳಿ | ಬಾಲಕುಂಟಹಳ್ಳಿ | 1 | ಪರಿಶಿಷ್ಟ ಜಾತಿ (ಮಹಿಳೆ) |

**ಡಾ॥ ವಿಶಾಲ್.ಆರ್, ಭಾ.ಆ.ಸೇ**

ಜಿಲ್ಲಾಧಿಕಾರಿಗಳು

ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳು, ಚಿಕ್ಕಬಳ್ಳಾಪರ ಜಿಲ್ಲೆ

## ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳ ಕಾರ್ಯಾಲಯ ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ

**ಪ್ರಪತ್ರ-2**

[12(2)ನೇ ನಿಯಮವನ್ನು ನೋಡಿ]

**ಅಧಿಸೂಚನೆ ಸಂಖ್ಯೆ: ಇಎಲ್‌ಎನ್(2)/ಸಿಆರ್.38(ಶಿ)/2013-14, ದಿನಾಂಕ: 12/02/2014**

ಚಿಕ್ಕಬಳ್ಳಾಪುರ ಜಿಲ್ಲೆ, **ಶಿಡ್ಲಘಟ್ಟ ತಾಲ್ಲೂಕಿನ** ವ್ಯಾಪ್ತಿಯ ಲಗತ್ತು ಅನುಬಂಧದಲ್ಲಿ ಕಂಡ 3 ಗ್ರಾಮಪಂಚಾಯಿತಿಯ 3 ಚುನಾಯಿತ ಸದಸ್ಯರ ಸ್ಥಾನವು ವಿವಿಧ ಕಾರಣಗಳಿಂದ ತೆರವಾಗಿದ್ದು, ಇದನ್ನು ಭರ್ತಿ ಮಾಡಲು ಚುನಾವಣೆ ನಡೆಸಬೇಕಾಗಿರುವುದರಿಂದ:

ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆ ನಡೆಸುವ) ನಿಯಮಗಳು, 1993ರ 12(2)ನೇ ನಿಯಮಕ್ಕನುಸಾರವಾಗಿ **ಡಾ॥ ವಿಶಾಲ್.ಆರ್, ಭಾ.ಆ.ಸೇ, ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ** ಆದ ನಾನು ಸದರಿ ಚುನಾವಣೆಗೆ ಸಂಬಂಧಿಸಿದಂತೆ ಈ ಕೆಳಕಂಡ ಕಾರ್ಯಕ್ರಮದ ವೇಳಾಪಟ್ಟಿಯನ್ನು ಈ ಮೂಲಕ ನಿಗದಿಪಡಿಸಿದ್ದೇನೆ.

| ಕ್ರ. ಸಂ. | ಚುನಾವಣಾ ಚಟುವಟಿಕೆ | ದಿನಾಂಕ |
|---|---|---|
| 1. | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 19/02/2014 ಬುಧವಾರ |
| 2. | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 20/02/2014 ಗುರುವಾರ |
| 3. | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | 22/02/2014 ಶನಿವಾರ |
| 4. | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ | 02/03/2014 ಭಾನುವಾರ |
| 5. | ಮರು ಮತದಾನ ಅವಶ್ಯವಿದ್ದರೆ, ಮರು ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ | 04/03/2014 ಮಂಗಳವಾರ |
| 7. | ಮತಗಳ ಎಣಿಕೆ ಬೆಳಿಗ್ಗೆ 8.00 ಗಂಟೆಯಿಂದ (ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ) | 05/03/2014 ಬುಧವಾರ |
| 8. | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 05/03/2014 ಬುಧವಾರ |

**ಜಿಲ್ಲೆ: ಚಿಕ್ಕಬಳ್ಳಾಪುರ**

**ಅನುಬಂಧ**

**ಚಿಕ್ಕಬಳ್ಳಾಪುರ ಜಿಲ್ಲಾ ವ್ಯಾಪ್ತಿಯ ಗ್ರಾಮಪಂಚಾಯಿತಿಗಳಲ್ಲಿ ವಿವಿಧ ಕಾರಣಗಳಿಂದ ತೆರವಾಗಿರುವ ಸದಸ್ಯ ಸ್ಥಾನಗಳನ್ನು ತುಂಬಲು, ಚುನಾವಣೆ ನಡೆಸಬೇಕಾಗಿರುವ ಗ್ರಾಮಪಂಚಾಯಿತಿಗಳ ಹೆಸರು**

**ತಾಲ್ಲೂಕಿನ ಹೆಸರು: ಶಿಡ್ಲಘಟ್ಟ**

| ಕ್ರ. ಸಂ. | ಗ್ರಾಮಪಂಚಾಯಿತಿ ಹೆಸರು | ತೆರವಾಗಿರುವ ಕ್ಷೇತ್ರದ ಹೆಸರು | ತೆರವಾಗಿರುವ ಸ್ಥಾನಗಳು | ಖಾಲಿ ಸ್ಥಾನದ ಮೀಸಲಾತಿ ವಿವರ |
|---|---|---|---|---|
| 1. | ಜಂಗಮಕೋಟೆ | ಜಂಗಮಕೋಟೆ–03 | 1 | ಪರಿಶಿಷ್ಟ ಪಂಗಡ (ಮಹಿಳೆ) |
| 2. | ಸಾದಲಿ | ಸಾದಲಿ–02 | 1 | ಹಿಂದುಳಿದ 'ಬ' ವರ್ಗ |
| 3. | ಬಶೆಟ್ಟಿಹಳ್ಳಿ | ಬಶೆಟ್ಟಿಹಳ್ಳಿ–01 | 1 | ಪರಿಶಿಷ್ಟ ಜಾತಿ (ಮಹಿಳೆ) |

**ಡಾ|| ವಿಶಾಲ್.ಆರ್, ಭಾ.ಆ.ಸೇ**

ಜಿಲ್ಲಾಧಿಕಾರಿಗಳು

ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳು, ಚಿಕ್ಕಬಳ್ಳಾಪರ ಜಿಲ್ಲೆ

## ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳ ಕಾರ್ಯಾಲಯ ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ

**ಪ್ರಪತ್ರ–2**

[12(2)ನೇ ನಿಯಮವನ್ನು ನೋಡಿ]

**ಅಧಿಸೂಚನೆ ಸಂಖ್ಯೆ: ಇಎಲ್‌ಎನ್(2)/ಸಿಆರ್.38(ಗೌ)/2013–14, ದಿನಾಂಕ: 12/02/2014**

ಚಿಕ್ಕಬಳ್ಳಾಪುರ ಜಿಲ್ಲೆ, **ಗೌರಿಬಿದನೂರು ತಾಲ್ಲೂಕಿನ** ವ್ಯಾಪ್ತಿಯ ಲಗತ್ತು ಅನುಬಂಧದಲ್ಲಿ ಕಂಡ 3 ಗ್ರಾಮಪಂಚಾಯಿತಿಗಳ 3 ಚುನಾಯಿತ ಸದಸ್ಯರ ಸ್ಥಾನಗಳು ವಿವಿಧ ಕಾರಣಗಳಿಂದ ತೆರವಾಗಿದ್ದು, ಇವುಗಳನ್ನು ಭರ್ತಿ ಮಾಡಲು ಚುನಾವಣೆ ನಡೆಸಬೇಕಾಗಿರುವುದರಿಂದ:

ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆ ನಡೆಸುವ) ನಿಯಮಗಳು, 1993ರ 12(2)ನೇ ನಿಯಮಕ್ಕನುಸಾರವಾಗಿ **ಡಾ|| ವಿಶಾಲ್.ಆರ್, ಭಾ.ಆ.ಸೇ, ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ** ಆದ ನಾನು ಸದರಿ ಚುನಾವಣೆಗೆ ಸಂಬಂಧಿಸಿದಂತೆ ಈ ಕೆಳಕಂಡ ಕಾರ್ಯಕ್ರಮದ ವೇಳಾಪಟ್ಟಿಯನ್ನು ಈ ಮೂಲಕ ನಿಗದಿಪಡಿಸಿದ್ದೇನೆ.

| ಕ್ರ. ಸಂ. | ಚುನಾವಣಾ ಚಟುವಟಿಕೆ | ದಿನಾಂಕ |
|---|---|---|
| 1. | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 19/02/2014 ಬುಧವಾರ |
| 2. | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 20/02/2014 ಗುರುವಾರ |
| 3. | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | 22/02/2014 ಶನಿವಾರ |
| 4. | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ | 02/03/2014 ಭಾನುವಾರ |
| 5. | ಮರು ಮತದಾನ ಅವಶ್ಯವಿದ್ದರೆ, ಮರು ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ | 04/03/2014 ಮಂಗಳವಾರ |
| 7. | ಮತಗಳ ಎಣಿಕೆ ಬೆಳಿಗ್ಗೆ 8.00 ಗಂಟೆಯಿಂದ (ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ) | 05/03/2014 ಬುಧವಾರ |
| 8. | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 05/03/2014 ಬುಧವಾರ |

**ಜಿಲ್ಲೆ: ಚಿಕ್ಕಬಳ್ಳಾಪುರ**

**ಅನುಬಂಧ**

**ಚಿಕ್ಕಬಳ್ಳಾಪುರ ಜಿಲ್ಲಾ ವ್ಯಾಪ್ತಿಯ ಗ್ರಾಮಪಂಚಾಯಿತಿಗಳಲ್ಲಿ ವಿವಿಧ ಕಾರಣಗಳಿಂದ ತೆರವಾಗಿರುವ ಸದಸ್ಯ ಸ್ಥಾನಗಳನ್ನು ತುಂಬಲು, ಚುನಾವಣೆ ನಡೆಸಬೇಕಾಗಿರುವ ಗ್ರಾಮಪಂಚಾಯಿತಿಗಳ ಹೆಸರು**

**ತಾಲ್ಲೂಕಿನ ಹೆಸರು: ಗೌರಿಬಿದನೂರು**

| ಕ್ರ. ಸಂ. | ಗ್ರಾಮಪಂಚಾಯಿತಿ ಹೆಸರು | ತೆರವಾಗಿರುವ ಕ್ಷೇತ್ರದ ಹೆಸರು | ತೆರವಾಗಿರುವ ಸ್ಥಾನಗಳು | ಖಾಲಿ ಸ್ಥಾನದ ಮೀಸಲಾತಿ ವಿವರ |
|---|---|---|---|---|
| 1. | ಬೈಚಾಪುರ | ಉಚ್ಚೋದನಹಳ್ಳಿ | 1 | ಹಿಂದುಳಿದ 'ಬ' ವರ್ಗ |
| 2. | ಹೊಸೂರು | ಹೊಸೂರು–04 | 1 | ಪರಿಶಿಷ್ಟ ಪಂಗಡ (ಮಹಿಳೆ) |
| 3. | ಕುರೂಡಿ | ಕದಿರನಹಳ್ಳಿ–04 | 1 | ಹಿಂದುಳಿದ 'ಅ' ವರ್ಗ (ಮಹಿಳೆ) |

**ಡಾ|| ವಿಶಾಲ್.ಆರ್, ಭಾ.ಆ.ಸೇ**

ಜಿಲ್ಲಾಧಿಕಾರಿಗಳು

ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳು, ಚಿಕ್ಕಬಳ್ಳಾಪರ ಜಿಲ್ಲೆ

**PR.139**

**SC.50**

## IN THE COURT OF 1ST M.M TRAFFIC COURT MAYOHALL, BANGALORE CITY

It is hereby notified to the public that the Madivala Traffic police Station, Bangalore city have seized the following vehicles as unclaimed and such vehicles may put their claim on month from the date of this publication.

Dated:

Bangalore city:

By Order of the court
**Sri.Rangegowda,**
Shiristedar,
1st MMTC, Bangalore city

List of Unclaimed vehicles are lying in Madivala Traffic police Station, Bangalore city which have been seized under cases

| Si.No | P.F No | Model | Reg No | Engine No | Chasis No |
|---|---|---|---|---|---|
| 01 | 47/2013 | SCOOTER | CAL-9832 | NIL | NIL |
| 02 | 47/2013 | BAJAL LML | KA-04-X-8435 | 51952 | 51921 |
| 03 | 47/2013 | MOTOR CYCLE | KA-05-EQ-775 | 33318 | 18191 |
| 04 | 47/2013 | BAJAJ CHETAK | CKN-3791 | W06E767023 | W06C729951 |
| 05 | 47/2013 | BOXER | KA-05-EH-9784 | 54116 | 42882 |
| 06 | 47/2013 | SCOOTER | KA-05-S-8988 | NIL | NIL |
| 07 | 47/2013 | SCOOTER | MH-09-X-5437 | NIL | NIL |
| 08 | 47/2013 | SCOOTER | CTP-5497 | NIL | NIL |
| 09 | 47/2013 | SCOOTER | CKJ-3681 | NIL | NIL |
| 10 | 47/2013 | SCOOTER | CKM-4679 | NIL | NIL |
| 11 | 47/2013 | SCOOTER | KA-05-E-49 | NIL | NIL |
| 12 | 47/2013 | BAJAJ CHETAK | CKS-5423 | 06E953228 | 06C918133 |
| 13 | 47/2013 | SCOOTER | KA-01-J-8193 | NIL | NIL |
| 14 | 47/2013 | MOTOR CYCLE | CKR-9273 | NIL | NIL |
| 15 | 47/2013 | BAJAJ CHETAK | KA-05-U-7219 | 35M96L93955 | 06F96L89566 |
| 16 | 47/2013 | SCOOTER | KA-04-E-2948 | NIL | NIL |
| 17 | 47/2013 | MOTOR CYCLE | KA-01-E-687 | NIL | NIL |
| 18 | 47/2013 | MOTOR CYCLE | KA-03-K-3655 | NIL | NIL |
| 19 | 47/2013 | SCOOTER | KA-05-J-9132 | NIL | NIL |
| 20 | 47/2013 | SCOOTER | KA-05-K-292 | NIL | NIL |
| 21 | 47/2013 | MOTOR CYCLE | PY-01-L-3347 | NIL | NIL |
| 22 | 47/2013 | MOTOR CYCLE | KA-01-EB-580 | NIL | NIL |
| 23 | 47/2013 | KINETIC HONDA | KA-05-EF-9461 | 190915 | 194905 |
| 24 | 47/2013 | BAJAJ CHETAK | KA-01-L-9678 | 35MBDF62901 | 06FBDF26496 |
| 25 | 47/2013 | SCOOTER | KA-03-EB-3160 | NIL | NIL |
| 26 | 47/2013 | MOTOR CYCLE | KA-05-EC-7256 | ALFBLH17674 | 17797 |
| 27 | 47/2013 | SPLENDOR | KA-13-U-3028 | 27455 | 11797 |
| 28 | 47/2013 | MOTOR CYCLE | CKP-5814 | NIL | NIL |
| 29 | 47/2013 | BAJAJ | KA-01-5956 | 111784 | M94 |
| 30 | 47/2013 | MOTOR CYCLE | KA-03-X-7359 | NIL | NIL |
| 31 | 47/2013 | BAJAJ | KA-33-2063 | 05342 | 091460 |
| 32 | 47/2013 | SCOOTER | CAL-9832 | NIL | NIL |
| 33 | 47/2013 | BAJAL LML | KA-04-X-8435 | 51952 | 51921 |
| 34 | 47/2013 | MOTOR CYCLE | KA-05-EQ-775 | 33318 | 18191 |
| 35 | 47/2013 | BAJAJ CHETAK | CKN-3791 | W06E767023 | W06C729951 |
| 36 | 47/2013 | BOXER | KA-05-EH-9784 | 54116 | 42882 |
| 37 | 47/2013 | SCOOTER | KA-05-S-8988 | NIL | NIL |
| 38 | 47/2013 | SCOOTER | MH-09-X-5437 | NIL | NIL |
| 39 | 47/2013 | SCOOTER | CTP-5497 | NIL | NIL |
| 40 | 47/2013 | SCOOTER | CKJ-3681 | NIL | NIL |
| 41 | 47/2013 | SCOOTER | CKM-4679 | NIL | NIL |
| 42 | 47/2013 | SCOOTER | KA-05-E-49 | NIL | NIL |

By Order of the court
**Sri.Rangegowda,**
Shiristedar,
1st MMTC, Bangalore city

**PR.134**

## ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು, ಇವರ ನಡವಳಿಗಳು

**ವಿಷಯ :** ಶ್ರೀ ಕದಮ ಗೋರಖ, ದ್ವಿತೀಯ ದರ್ಜೆ ಸಹಾಯಕ, ಜಿಲ್ಲಾ ಆಸ್ಪತ್ರೆ, ಬೀದರ್ ಇವರ ಲೋಕಾಯುಕ್ತ ಟ್ರ್ಯಾಪ್ ಪ್ರಕರಣದ ಬಗ್ಗೆ–ಅಂತಿಮ ಆದೇಶ.

**ಓದಲಾಗಿದೆ :**

1. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರ ಪತ್ರ ಸಂಖ್ಯೆ : ಲೋಕ್/ಐಎನ್‌ವಿ (ಜಿ)/ಜಿ–27/ಸಿಆರ್ 7/2008, ಬೀದರ್ ದಿನಾಂಕ : 17–07–2008.
2. ನಿರ್ದೇಶನಾಲಯ ಸಮ ಸಂಖ್ಯೆಯ ನಡವಳಿ ದಿನಾಂಕ : 05–08–2008 (ಸೇವೆಯಿಂದ ಅಮಾನತ್ತು)
3. ನಿರ್ದೇಶನಾಲಯ ಸಮ ಸಂಖ್ಯೆಯ ಅಧಿಕೃತ ಜ್ಞಾಪನಾ ಪತ್ರ ದಿನಾಂಕ : 19–05–2009.
4. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು, ಇವರ ಪತ್ರ ಸಂಖ್ಯೆ : ಲೋಕ್/ಐಎನ್‌ವಿ(ಜಿ)/ಜಿ–27/ಸಿಆರ್ 7/2008, ಬೀದರ್ ದಿನಾಂಕ : 21–04–2009. (ಅಂತಿಮ ವರದಿ)
5. ನಿರ್ದೇಶನಾಲಯದ ಸಮ ಸಂಖ್ಯೆಯ ನಡವಳಿ ದಿನಾಂಕ : 12–01–2010 (ಅಭಿಯೋಜನಾ ಮಂಜೂರಾತಿ)
6. ಸರ್ಕಾರದ ಪತ್ರ ಸಂ. ಆಕುಕ 182 ಹೆಚ್‌ಎಸ್‌ಎಂ 2011, ಬೆಂಗಳೂರು, ದಿನಾಂಕ : 06–08–2011.
7. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರ ಪತ್ರ ಸಂಖ್ಯೆ : ಲೋಕ್/ಐಎನ್‌ವಿ (ಜಿ)/ಜಿ–27/ಸಿಆರ್–7/2008, ಬೀದರ್ ದಿನಾಂಕ : 03–10–2013.

ಶ್ರೀ ಕದಮ ಗೋರಖ, ದ್ವಿತೀಯ ದರ್ಜೆ ಸಹಾಯಕ, ಜಿಲ್ಲಾ ಆಸ್ಪತ್ರೆ, ಬೀದರ್ ಇವರನ್ನು ಬೀದರ್ ಲೋಕಾಯುಕ್ತ ಪೊಲೀಸರು ದಿನಾಂಕ : 04–07–2008 ರಂದು ದಸ್ತಗಿರಿ ಮಾಡಿ ಇವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ ಸಂಖ್ಯೆ : ಗುನ್ನೆ/ಸಂ.7/2008 ರಲ್ಲಿ ಲಂಚ ನಿರ್ಮೂಲನಾ ಕಾಯ್ದೆ 1988ರ ಸೆಕ್ಷನ್ 7 ಮತ್ತು 13(1)(ಡಿ) ಹಾಗೂ 13(2) ನ್ನು ಓದಿಕೊಂಡಂತೆ ದೂರನ್ನು ದಾಖಲಿಸಿಕೊಂಡು ತನಿಖೆ ನಡೆಸಲಾಗಿದ್ದು. ದಿನಾಂಕ : 04–07–2008 ರಂದು ಲಂಚದ ಹಣವನ್ನು ಪಡೆದುಕೊಳ್ಳುತ್ತಿದ್ದಾಗ ಲೋಕಾಯುಕ್ತರ ಜಾಲದಲ್ಲಿ ಸಿಲುಕಿ, ಮೇಲೆ ಓದಲಾದ ಉಲ್ಲೇಖ (1)ರಲ್ಲಿ ಸದರಿ ನೌಕರರ ಮೇಲಿನ ಆರೋಪವು ಸಾಭೀತಾಗಿರುವುದಾಗಿ ತಿಳಿಸಿ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 14(ಎ)ರ ಅನ್ವಯ ಇಲಾಖಾ ವಿಚಾರಣೆ ಕೈಗೊಳ್ಳಲು ಸನ್ಮಾನ್ಯ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಇವರಿಗೆ ಆದೇಶ ನೀಡಿರುತ್ತಾರೆ. ಮೇಲೆ ಓದಲಾದ ಉಲ್ಲೇಖ (2)ರಲ್ಲಿ ನೌಕರರು ದಿನಾಂಕ : 05–08–2008 ರಂದು ಅಮಾನತ್ತು ಮಾಡಲಾಗಿತ್ತು. ಮೇಲೆ ಓದಲಾದ ಉಲ್ಲೇಖ (3)ರಲ್ಲಿ ನೌಕರರಿಗೆ ಕರ್ತವ್ಯಕ್ಕೆ ಹಾಜರಾಗಲು ಅನುಮತಿ ನೀಡಿ ಸ್ಥಳ ನಿಯುಕ್ತಿಗೊಳಿಸಲಾಗಿತ್ತು. ಮೇಲೆ ಓದಲಾದ (4)ರಲ್ಲಿ ವಿಚಾರಣೆ ನಡೆಸಿ, ಅಂತಿಮ ತೀರ್ಪು ನೀಡಿ ತೀರ್ಪಿನಲ್ಲಿ ಆರೋಪಿಯ ವಿರುದ್ಧ ಭ್ರಷ್ಟಾಚಾರ ಆರೋಪದಡಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆ ಅನುಮತಿ ನೀಡಿದ ಪ್ರಕಾರ ಬೀದರ್ ಲೋಕಾಯುಕ್ತ ವಿಶೇಷ ನ್ಯಾಯಾಲಯವು ದೋಷಾರೋಪಣಾ ಪಟ್ಟಿ ಸಲ್ಲಿಸಿದ್ದು ಅದರ ವಿಚಾರಣೆಯು ನ್ಯಾಯಾಲಯದ ವಿಶೇಷ ಸಿ.ಸಿ.ಸಂ. 02/2010 ರಲ್ಲಿ ವಿಚಾರಣೆ ನಡೆಸಿ ದಿನಾಂಕ : 04–07–2013 ರಂದು ಆರೋಪಿ ಶ್ರೀ ಕದಮ ಗೋರಖ, ದ್ವಿತೀಯ ದರ್ಜೆ ಸಹಾಯಕ, ಜಿಲ್ಲಾ ಆಸ್ಪತ್ರೆ, ಬೀದರ್ ಇವರನ್ನು ತಪ್ಪಿತಸ್ಥರೆಂದು ಪರಿಗಣಿಸಿ ಭ್ರಷ್ಟಾಚಾರ ಪ್ರತಿಬಂಧಕ ಕಾಯ್ದೆ–1988ರ ಕಲಂ 7 ರಡಿ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ 1 ವರ್ಷ ಕಠಿಣ ಸಜೆ ಮತ್ತು ರೂ. 5000/–ಗಳ ದಂಡ, ದಂಡ ಪಾವತಿಸಲು ತಪ್ಪಿದ್ದಲ್ಲಿ, 3 ತಿಂಗಳ ಸಾದಾ ಸಜೆ ಹಾಗೂ ಕಲಂ 13(1)(ಡಿ) ರಡಿ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ 2 ವರ್ಷ ಕಠಿಣ ಸಜೆ ಮತ್ತು ರೂ. 10,000/– ಗಳ ದಂಡ, ದಂಡ ಪಾವತಿಸಲು ತಪ್ಪಿದ್ದಲ್ಲಿ 6 ತಿಂಗಳ ಸಾದಾ ಸಜೆ ಅನುಭವಿಸತಕ್ಕದೆಂದು ಆದೇಶಿಸಿರುತ್ತದೆ. ಮಾನ್ಯ ಸರ್ವೋಚ್ಛ ನ್ಯಾಯಾಲಯವು ಕ್ರಿಮಿನಲ್ ರಿವಿಜನ್ ಸಂ. 770/2001 (ಎಸ್.ಎಲ್.ಪಿ. ಅಪರಾಧ ಸಂ. 2202/2001) ರಲ್ಲಿ ದಿನಾಂಕ : 02–08–2001 ರಂದು ಹೊರಡಿಸಿದ ತೀರ್ಪಿನಲ್ಲಿ ಉಲ್ಲೇಖಿಸಿರುವಂತೆ ಘನ ಜಿಲ್ಲಾ ನ್ಯಾಯಾಲಯವು ಆರೋಪಿ ನೌಕರನಿಗೆ/ಅಧಿಕಾರಿಗೆ ಶಿಕ್ಷೆ ವಿಧಿಸಿ ತೀರ್ಪು ನೀಡಿದ್ದರೆ ತಕ್ಷಣದಿಂದ ಆಪಾದಿತರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳುವಂತೆ ಆದೇಶಿಸಿರುತ್ತದೆ. ಸರ್ಕಾರವು ಸುತ್ತೋಲೆ ಸಂಖ್ಯೆ : ಸಿಆಸುಇ 9 ಸೇಇವಿ 95, ದಿನಾಂಕ : 26–06–1996ರಲ್ಲಿ ಘನ ನ್ಯಾಯಾಲಯದಲ್ಲಿ ಆರೋಪಿತರ ಮೇಲಿನ ಆರೋಪಗಳು ಸಾಭೀತಾಗಿ ಆರೋಪಿತನಿಗೆ ಶಿಕ್ಷೆಯಾದಲ್ಲಿ ಅಂತಹ ಅಧಿಕಾರಿ/ನೌಕರರನ್ನು ಸೇವೆಯಿಂದ **ತಕ್ಷಣ ವಜಾ ಮಾಡತಕ್ಕದ್ದು** ಎಂದು ಆದೇಶಿಸಿರುತ್ತದೆ. ಆದ್ದರಿಂದ ಕೆ.ಸಿ.ಎಸ್. (ಸಿಸಿಎ) ನಿಯಮಾವಳಿಗಳು 1957ರ ನಿಯಮ 8(ii) ರಿಂದ 8 (viii) ವರೆಗಿನ ದಂಡನೆಯನ್ನು ವಿಧಿಸುವ ಸಕ್ಷಮ ಶಿಸ್ತು ಪ್ರಾಧಿಕಾರಿಯಾಗಿರುವುದರಿಂದ ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರು ನೀಡಿರುವ ವರದಿಯಲ್ಲಿ ಆರೋಪವು ಸಾಭೀತಾಗಿರುವುದರಿಂದ ಮತ್ತು ಸೇವೆಯಿಂದ ವಜಾಗೊಳಿಸಲು ಶಿಫಾರಸ್ಸು ಮಾಡಿರುವುದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

### ಆದೇಶ ಸಂಖ್ಯೆ : ಡಿಪಿಎನ್ (19) ಸಿಆರ್–27/2008–09, ದಿನಾಂಕ : 27–01–2014

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಗಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ವಿ.ಬಿ. ಪಾಟೀಲ್, ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಆದ ನಾನು ಶ್ರೀ ಕದಮ ಗೋರಖ, ದ್ವಿತೀಯ ದರ್ಜೆ ಸಹಾಯಕ, ಜಿಲ್ಲಾ ಆಸ್ಪತ್ರೆ, ಬೀದರ್ ಇವರ ಮೇಲಿನ ಲಂಚ ಪ್ರಕರಣದ ಆರೋಪವು ಸಾಭೀತಾಗಿರುವುದರಿಂದ ಆರೋಪವನ್ನು ಗಂಭೀರವಾಗಿ ಪರಿಗಣಿಸಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ರೀತ್ಯಾ ಹಾಗೂ ಸರ್ಕಾರಿ ಸೇವೆಗೆ ಪುನಃ ನೇಮಕಾತಿ ಹೊಂದಲು ಅನರ್ಹನಾಗುವ ರೀತಿ ನಿಯಮ 8(viii)ರ ಮೇರೆಗೆ ಸರ್ಕಾರಿ ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಿರುತ್ತೇನೆ.

**ಆಯುಕ್ತರು,**
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು,
ಬೆಂಗಳೂರು.

**P.R. 108**
**SC-05**

## ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಸಂವಾಪ್ರ 59 ಕೆಎಂಯು 2010, ಬೆಂಗಳೂರು, ದಿನಾಂಕ: 21ನೇ ಸೆಪ್ಟೆಂಬರ್, 2013**

ಕರ್ನಾಟಕ ಸರ್ಕಾರವು ಪರಿವಿಡಿಯಲ್ಲಿ ವಿವರಿಸಿರುವ **ರಾಮನಗರ ಜಿಲ್ಲೆ, ಮಾಗಡಿ ತಾಲ್ಲೂಕು, ಮಾಗಡಿ ಪಟ್ಟಣದಲ್ಲಿರುವ ಐತಿಹಾಸಿಕ ಮಾಗಡಿ ಕೋಟೆ ಹಾಗೂ ಕಂದಕದ ಪ್ರದೇಶವನ್ನು** "ಕರ್ನಾಟಕ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕ ಮತ್ತು ಪುರಾತತ್ವ ನಿವೇಶನಗಳು ಮತ್ತು ಅವಶೇಷಗಳ ಅಧಿನಿಯಮ 1961ರ ಕಲಂ 4(1)ರಡಿ" (ಕರ್ನಾಟಕ ಆ್ಯಕ್ಟ್ 1962) ರಾಜ್ಯ ಸಂರಕ್ಷಿತ ಪಾರಂಪರಿಕ ಸ್ಮಾರಕವನ್ನಾಗಿ ಘೋಷಿಸಲು ಅಭಿಪ್ರಾಯಪಟ್ಟು, ಅದರಂತೆ 2013ರ ಫೆಬ್ರವರಿ 7ನೇ ದಿನಾಂಕದ ಕರ್ನಾಟಕ ರಾಜ್ಯಪತ್ರದ "ಭಾಗ–3"ರಲ್ಲಿ ದಿನಾಂಕ: 21–03–2012ರ ಅಧಿಸೂಚನೆ ಸಂಖ್ಯೆ ಕಸಂವಾಪ್ರ 59 ಕೆಎಂಯು 2010ನ್ನು ಪ್ರಕಟಿಸಿ, ಅದರಿಂದ ಬಾಧಿತರಾಗುವ ಎಲ್ಲಾ ವ್ಯಕ್ತಿಗಳಿಂದ ಆಕ್ಷೇಪಣೆಗಳನ್ನು ಆಹ್ವಾನಿಸಿ ಪ್ರಕಟಿಸಲಾಗಿದ್ದು, ಈ ಬಗ್ಗೆ ಯಾವುದೇ ಆಕ್ಷೇಪಣೆಗಳು ಸ್ವೀಕೃತವಾಗಿಲ್ಲದಿರುವುದರಿಂದ ಈಗ "ಕರ್ನಾಟಕ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕಗಳು ಮತ್ತು ಪುರಾತತ್ವ ಸ್ಥಳಗಳು ಮತ್ತು ಅವಶೇಷಗಳ ಅಧಿನಿಯಮ 1961ರ ಕಲಂ 4 (3)"ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಪರಿವಿಡಿಯಲ್ಲಿ ವಿವರಿಸಿರುವ **ರಾಮನಗರ ಜಿಲ್ಲೆ, ಮಾಗಡಿ ತಾಲ್ಲೂಕು, ಮಾಗಡಿ ಪಟ್ಟಣದಲ್ಲಿರುವ ಐತಿಹಾಸಿಕ ಮಾಗಡಿ ಕೋಟೆ ಹಾಗೂ ಕಂದಕದ ಪ್ರದೇಶವನ್ನು** ಸಮುಚ್ಛಯವನ್ನು **"ರಾಜ್ಯ ಸಂರಕ್ಷಿತ ಪಾರಂಪರಿಕ ಸ್ಮಾರಕ"ವೆಂದು** ಈ ಮೂಲಕ ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಬಿ. ಹೇಮಣ್ಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ (ಆಡಳಿತ ಕನ್ನಡ)

### ಪರಿವಿಡಿ

**(ಅಧಿಸೂಚನೆ ಸಂಖ್ಯೆ: ಕಸಂವಾಪ್ರ 59 ಕೆಎಂಯು 2010, ದಿನಾಂಕ: 21–09–2013)**

| ತಾಲ್ಲೂಕು | ಇರುವ ಸ್ಥಳ | ಸ್ಮಾರಕ/ಕಟ್ಟಡದ ಹೆಸರು | ಸಂರಕ್ಷಣೆಗೆ ಒಳಪಡಬಹುದಾದ ರೆವಿನ್ಯೂ ನಿವೇಶನ | ವಿಸ್ತೀರ್ಣ | ಮೇರೆಗಳು (ಚಕ್ಕುಬಂದಿ) | | ಒಡೆತನ | ಷರಾ |
|---|---|---|---|---|---|---|---|---|
| ಮಾಗಡಿ | ಮಾಗಡಿ ಪಟ್ಟಣ | ಮಾಗಡಿ ಕೋಟೆ ಮತ್ತು ಕಂದಕಗಳು ಒಳಗೊಂಡಂತೆ ಇರುವ ಪ್ರದೇಶ | ಸ.ನಂ. 201 | 2 ಎಕರೆ 15 ಗುಂಟೆ | ಪೂರ್ವಕ್ಕೆ : | ರಸ್ತೆ | ಮುಜರಾಯಿ | ರಾಮನಗರ ಜಿಲ್ಲೆ ಮಾಗಡಿ ತಾಲ್ಲೂಕು ಮಾಗಡಿ ಪಟ್ಟಣದಲ್ಲಿರುವ ಐತಿಹಾಸಿಕ ಕೋಟೆಯು 11ನೇ ಶತಮಾನದಿಂದ 14ನೇ ಶತಮಾನದ ನಡುವೆ ನಿರ್ಮಿತಗೊಂಡಿರುತ್ತದೆ. ಕೋಟೆ ಕಂದಕಗಳೂ ಸೇರಿದಂತೆ ಒಟ್ಟಾರೆ 13 ಎಕರೆ 34 ಗುಂಟೆಯ ಪ್ರದೇಶವನ್ನು ರಾಜ್ಯ ಸಂರಕ್ಷಿತ ಪ್ರದೇಶವೆಂದು ಘೋಷಿಸಬೇಕಾಗಿದೆ. |
| | | | ಸ.ನಂ. 202 | – <br> 4 ಎಕರೆ 35 ಗುಂಟೆ | ಪಶ್ಚಿಮಕ್ಕೆ | ರಸ್ತೆ | | |
| | | | – <br> ಸ.ನಂ. 203 | 0.19 ಗುಂಟೆ | ಉತ್ತರಕ್ಕೆ | ರಸ್ತೆ | | |
| | | | ಸ.ನಂ. 205 | 2 ಎಕರೆ 05 ಗುಂಟೆ | ದಕ್ಷಿಣಕ್ಕೆ : | ರಸ್ತೆ | | |
| | | | – <br> ಸ.ನಂ. 208 | 4 ಎಕರೆ | | | | |
| | | | ಒಟ್ಟಾರೆ | 13 ಎಕರೆ 34 ಗುಂಟೆ | | | | |

**ಜಿ.ಬಿ. ಹೇಮಣ್ಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ (ಆಡಳಿತ ಕನ್ನಡ)

**P.R. 94**
**SC 50**

## ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಸಂವಾ 296 ಕೆಎಂಯು 2013, ಬೆಂಗಳೂರು, ದಿನಾಂಕ: 10ನೇ ಡಿಸೆಂಬರ್, 2013**

ಕರ್ನಾಟಕ ಸರ್ಕಾರವು ಪರಿವಿಡಿಯಲ್ಲಿ ವಿವರಿಸಿರುವ **ಉತ್ತರ ಕನ್ನಡ ಜಿಲ್ಲೆ, ಕುಮಟಾ ತಾಲ್ಲೂಕು ಹಿರೇಗುತ್ತಿಯಲ್ಲಿರುವ ಬ್ರಹ್ಮಜಟಕ ದೇವಸ್ಥಾನ, ಶ್ರೀ ಮಹಾಲಿಂಗೇಶ್ವರ ದೇವಾಲಯ ಐತಿಹಾಸಿಕ ಸಮುಚ್ಛಯ ಮತ್ತು ಧರ್ಮಶಾಲೆ ಕಟ್ಟಡ ಪ್ರದೇಶವನ್ನು** "ಕರ್ನಾಟಕ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕಗಳು ಮತ್ತು ಪುರಾತತ್ವ ನಿವೇಶನಗಳು ಮತ್ತು ಅವಶೇಷಗಳು ಅಧಿನಿಯಮ 1961ರ ಕಲಂ 19(1)ರಡಿ" (ಕರ್ನಾಟಕ ಆ್ಯಕ್ಟ್ ಆಫ್ 1962) ರಾಜ್ಯ ಸಂರಕ್ಷಿತ ಸ್ಮಾರಕವನ್ನಾಗಿ ಘೋಷಿಸಲು ರಾಜ್ಯ ಸರ್ಕಾರವು ಅಭಿಪ್ರಾಯಪಟ್ಟಿದೆ.

ಈ ಪ್ರದೇಶವನ್ನು ರಾಜ್ಯ ಸಂರಕ್ಷಿತ ಪ್ರದೇಶವೆಂದು ಘೋಷಿಸುವ ಬಗ್ಗೆ ಬಾಧಿತರಾದವರಿಂದ 60 ದಿನಗಳ ಅವಧಿಯೊಳಗೆ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿದೆ. ಈ ಕುರಿತಾದ ಆಕ್ಷೇಪಣೆಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ, ವಿಕಾಸಸೌಧ, ಬೆಂಗಳೂರು-560 001, ಇವರಿಗೆ ಸಲ್ಲಿಸತಕ್ಕದ್ದು. ಮೇಲ್ಕಾಣಿಸಿದ ಅವಧಿಯೊಳಗೆ ಸ್ವೀಕರಿಸಲಾದ ಆಕ್ಷೇಪಣೆಗಳನ್ನು ಪರಿಶೀಲಿಸಿ ಅಂತಿಮ ಅಧಿಸೂಚನೆ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಬಿ. ಹೇಮಣ್ಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ (ಆಡಳಿತ ಕನ್ನಡ)

### ಪರಿವಿಡಿ

| ಜಿಲ್ಲೆ | ತಾಲ್ಲೂಕು | ಇರುವ ಸ್ಥಳ | ಸ್ಮಾರಕ/ಕಟ್ಟಡದ ಹೆಸರು | ಸಂರಕ್ಷಣೆಗೆ ಒಳಪಡಬಹುದಾದ ರೆವಿನ್ಯೂ ನಿವೇಶನ | ವಿಸ್ತೀರ್ಣ | ಮೇರೆಗಳು (ಚಕ್ಕುಬಂದಿ) | | ಒಡೆತನ | ಷರಾ |
|---|---|---|---|---|---|---|---|---|---|
| ಉತ್ತರ ಕನ್ನಡ | ಕುಮಟಾ | ಹಿರೇಗುತ್ತಿ ಗ್ರಾಮ | 1. ಬ್ರಹ್ಮಜಟಕ | ಸ.ನಂ. 515/ಅ/1ಅ 10 ಅಣೆ ಮತ್ತು ಜಾಗ ನಕಾಶೆ ಲಗತ್ತಿಸಿದೆ. | 15 x 15=225 ಚ. ಅಡಿ | ಪೂರ್ವಕ್ಕೆ : | ಜಮೀನು | ಮುಜರಾಯಿ ಒಡೆತನದಲ್ಲಿರುತ್ತದೆ. ಪಟ್ಟಿ ಕ್ರಮ ಸಂಖ್ಯೆ 23 ಹಾಗೂ 60 ರಲ್ಲಿ ನಮೂದಿಸ ಲಾಗಿದೆ. | ಸದರಿ ದೇವಾಲಯವು ಪುರಾತನ ದೇವಾಲಯವಾಗಿದ್ದು, ಸದರಿ ದೇವಾಲಯಗಳ ಸ್ಥಳಗಳಲ್ಲಿ ಕೆಲವು ಸ್ಮಾರಕ ಶಿಲಾಶಾಸನಗಳು ಲಭ್ಯವಿರುವುದಾಗಿ ತಿಳಿಸಿರುತ್ತಾರೆ. |
| | | | | | | ಪಶ್ಚಿಮಕ್ಕೆ : | ರಾಷ್ಟ್ರೀಯ ಹೆದ್ದಾರಿ ಸಂಖ್ಯೆ 17 | | |
| | | | | | | ಉತ್ತರಕ್ಕೆ : | ಜಮೀನು | | |
| | | | | | | ದಕ್ಷಿಣಕ್ಕೆ : | ಜಮೀನು | | |
| | | | 2. ಶ್ರೀ ಮಹಾಲಿಂಗೇಶ್ವರ ದೇವಸ್ಥಾನದ ಕಟ್ಟಡ ಪಕ್ಕದ ಚಂದ್ರಶಾಲೆ | ಸ.ನಂ, 23 4 ಗುಂಟೆ 6 ಅಣೆ | 13 x 25=325 ಚ.ಅಡಿ 90 x 15=1350 ಚ.ಅಡಿ 50 x 16=800 ಚ. ಅಡಿ | ಪೂರ್ವಕ್ಕೆ : | ರಾಷ್ಟ್ರೀಯ ಹೆದ್ದಾರಿ ಸಂಖ್ಯೆ 17 | | |
| | | | | | | ಪಶ್ಚಿಮಕ್ಕೆ : | ಜಮೀನು | | |
| | | | | | | ಉತ್ತರಕ್ಕೆ : | ಜಮೀನು | | |
| | | | | | | ದಕ್ಷಿಣಕ್ಕೆ : | ಜಮೀನು | | |
| | | | 3. ಧರ್ಮಶಾಲೆ ಕಟ್ಟಡ | ಸ.ನಂ. 1ಅ/5 5 ಗುಂಟೆ | 42 x 38=1596 ಚ.ಅಡಿ | ಪೂರ್ವಕ್ಕೆ : | ರಾಷ್ಟ್ರೀಯ ಹೆದ್ದಾರಿ ಸಂಖ್ಯೆ 17 | | |
| | | | | | | ಪಶ್ಚಿಮಕ್ಕೆ : | ಜಮೀನು | | |
| | | | | | | ಉತ್ತರಕ್ಕೆ : | ಜಮೀನು | | |
| | | | | | | ದಕ್ಷಿಣಕ್ಕೆ : | ಜಮೀನು | | |

**ಜಿ.ಬಿ. ಹೇಮಣ್ಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ (ಆಡಳಿತ ಕನ್ನಡ)

P.R. 95
SC 50

## ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ

**ಅಧಿಸೂಚನೆ ಸಂಖ್ಯೆ: ಕಸಂವಾಪ್ರ 150 ಕೆಎಂಯು 2011, ಬೆಂಗಳೂರು, ದಿನಾಂಕ: 28ನೇ ಸೆಪ್ಟೆಂಬರ್, 2013**

ಕರ್ನಾಟಕ ಸರ್ಕಾರವು ಪರಿವಿಡಿಯಲ್ಲಿ ವಿವರಿಸಿರುವ **ವಿಜಾಪುರ ನಗರದಲ್ಲಿರುವ ತಾಜಬಾವಡಿ ಪ್ರಾಚೀನ ಸ್ಮಾರಕವನ್ನು** "ಕರ್ನಾಟಕ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕಗಳು ಮತ್ತು ಪುರಾತತ್ವ ನಿವೇಶನಗಳು ಮತ್ತು ಅವಶೇಷಗಳು ಅಧಿನಿಯಮ 1961ರ ಕಲಂ 4(1)ರ" (ಕರ್ನಾಟಕ ಆ್ಯಕ್ಟ್ ಆಫ್ 1962) ಅಡಿಯಲ್ಲಿ ರಾಜ್ಯ ಸಂರಕ್ಷಿತ ಸ್ಮಾರಕವನ್ನಾಗಿ ಘೋಷಿಸಲು ಅಭಿಪ್ರಾಯಪಟ್ಟಿದೆ. ಈ ಉದ್ದೇಶದಿಂದ ಸದರಿ ಸ್ಮಾರಕವನ್ನು ರಾಜ್ಯ ಸಂರಕ್ಷಿತ ಸ್ಮಾರಕವನ್ನಾಗಿ ಘೋಷಿಸಲು 60 ದಿನಗಳ ಅವಧಿಯೊಳಗೆ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿದೆ. ಈ ಸಂಬಂಧ ಆಕ್ಷೇಪಣೆಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ, ವಿಕಾಸಸೌಧ, ಬೆಂಗಳೂರು-560 001, ಇವರಿಗೆ ಸಲ್ಲಿಸಬಹುದು.

ಈ ಸ್ಮಾರಕವನ್ನು ರಾಜ್ಯ ಸಂರಕ್ಷಿತ ಸ್ಮಾರಕವೆಂದು ಘೋಷಿಸುವ ಬಗ್ಗೆ ಯಾವುದೇ ರೀತಿಯ ಆಕ್ಷೇಪಣೆಗಳು ಬಾಧಿತದಾರರಿಂದ ಮೇಲ್ಕಾಣಿಸಿದ ಅವಧಿಯೊಳಗೆ ರಾಜ್ಯ ಸರ್ಕಾರವು ಸ್ವೀಕರಿಸಿದಲ್ಲಿ ಸರ್ಕಾರವು ಅದನ್ನು ಪರಿಶೀಲಿಸಿ ಮುಂದಿನ ಕ್ರಮ ಕೈಗೊಳ್ಳುವುದು. ತಡವಾಗಿ ಸ್ವೀಕರಿಸಲಾಗುವ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಬಿ. ಹೇಮಣ್ಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ (ಆಡಳಿತ ಕನ್ನಡ)

**ಪರಿವಿಡಿ**

**(ಅಧಿಸೂಚನೆ ಸಂಖ್ಯೆ: ಕಸಂವಾಪ್ರ 150 ಕೆಎಂಯು 2011, ದಿನಾಂಕ: 28-09-2013)**

| ಜಿಲ್ಲೆ | ತಾಲ್ಲೂಕು | ಇರುವ ಸ್ಥಳ | ಸ್ಮಾರಕ/ಕಟ್ಟಡದ ಹೆಸರು | ಸಂರಕ್ಷಣೆಗೆ ಒಳಪಡಬಹುದಾದ ರೆವಿನ್ಯೂ ನಿವೇಶನ | ವಿಸ್ತೀರ್ಣ | | ಮೇರೆಗಳು (ಚಕ್ಕುಬಂದಿ) | | ಒಡೆತನ | ಷರಾ |
|---|---|---|---|---|---|---|---|---|---|---|
| ವಿಜಾಪುರ ಜಿಲ್ಲೆ | ವಿಜಾಪುರ ತಾಲ್ಲೂಕು | ವಿಜಾಪುರ ನಗರ ವಾರ್ಡ್ IV ಸಂಖ್ಯೆ ಸಿಟಿಎಸ್ ಸಂಖ್ಯೆ: 1706, 1032 | ತಾಜಬಾವಡಿ | ಕ್ಷೇತ್ರ ಅಂದಾಜು 30 ಗುಂಟೆ | ಕ್ಷೇತ್ರ ಅಂದಾಜು 30 ಗುಂಟೆ | 30 ಗುಂಟೆ | ಪೂರ್ವಕ್ಕೆ : | ಸಣ್ಣ ಪತ್ರಸದಿಂದ ಕಟ್ಟಿದ ಮನೆಗಳು ಇರುತ್ತವೆ | ಈ ಸ್ಮಾರಕವು ವಕ್ಫ್ ಮಂಡಳಿ, ಬೆಂಗಳೂರು ಇವರ ಆಡಳಿತದಲ್ಲಿದೆ. | ಕ್ರಿ.ಶ. 1620 ರಲ್ಲಿ ಇಬ್ರಾಹಿಂ ರೋಜಾ ದೊರೆಯು ತನ್ನ ರಾಣಿಯಾದ ತಾಜ್‌ಳ ನೆನಪಿನಲ್ಲಿ ಕಟ್ಟಿಸಿದ ಐತಿಹಾಸಿಕ ಬಾವಿ |
| | | | | | | | ಪಶ್ಚಿಮಕ್ಕೆ : | ರಸ್ತೆ | | |
| | | | | | | | ಉತ್ತರಕ್ಕೆ : | ಖುಲ್ಲಾ ಜಾಗ ಮತ್ತು ರಸ್ತೆ | | |
| | | | | | | | ದಕ್ಷಿಣಕ್ಕೆ : | – | | |

P.R. 96
SC 50

**ಜಿ.ಬಿ. ಹೇಮಣ್ಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ (ಆಡಳಿತ ಕನ್ನಡ)

## ಮುಖ್ಯ ಯೋಜನಾಧಿಕಾರಿ ಜಿಲ್ಲಾ ಪಂಚಾಯತ್, ಚಿಕ್ಕಬಳ್ಳಾಪುರ

**ಸಂಖ್ಯೆ:ಜಿಪಂಚಿ/ಯೋಶಾಖೆ/ಸ್ಥಾಯಿಸ/ಚುನಾವ/ವಿನಿಯಮ/2013-14, ದಿನಾಂಕ: 07.02.2014**

### ಚಿಕ್ಕಬಳ್ಳಾಪುರ, ಜಿಲ್ಲಾ ಪಂಚಾಯತಿ (ಸ್ಥಾಯಿ ಸಮಿತಿಗಳಿಗೆ ಸದಸ್ಯರ ಚುನಾವಣೆ) ವಿನಿಯಮಗಳು, 2013

ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ, 1993ರ ಪ್ರಕರಣಗಳು 188 (1) ಮತ್ತು 313ರ ಪ್ರಕರಣಗಳಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರದ ಪತ್ರ ಸಂಖ್ಯೆ: ಗ್ರಾಅಪ/188/ಜಿಪಸ/2013, ದಿನಾಂಕ:10/12/2013ರಡಿ ಅನುಮತಿ ಪಡೆದು ಚಿಕ್ಕಬಳ್ಳಾಪುರ ಜಿಲ್ಲಾ ಪಂಚಾಯಿತ್ ಈ ಕೆಳಗಿನ ವಿನಿಯಮಗಳನ್ನು ರಚಿಸುತ್ತದೆ,

1. **ಶೀರ್ಷಿಕೆ ಮತ್ತು ಪ್ರಾರಂಭ–**
   (1) ಈ ನಿಯಮಾವಳಿಗಳನ್ನು ಚಿಕ್ಕಬಳ್ಳಾಪುರ ಜಿಲ್ಲಾ ಪಂಚಾಯತ್(ಸ್ಥಾಯಿ ಸಮಿತಿಗಳಿಗೆ ಸದಸ್ಯರ ಚುನಾವಣೆ) ವಿನಿಯಮಗಳು, 2013 ಎಂದು ಕರೆಯತಕ್ಕದ್ದು.
   (2) ಈ ವಿನಿಯಮಗಳು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.
2. **ಪರಿಭಾಷೆಗಳು :** ಈ ನಿಯಮಾವಳಿಗಳಲ್ಲಿ ಸಂದರ್ಭಕ್ಕೆ ಬೇರೆ ಅರ್ಥದ ಅವಶ್ಯವಿರದಿದ್ದರೆ:
   - **"ಅಧಿನಿಯಮ"** ಅಂದರೆ ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ, 1993;
   - **"ನಮೂನೆ"** ಅಂದರೆ ಈ ನಿಯಮಾವಳಿಗಳಿಗೆ ಅಳವಡಿಸಲಾದ ನಮೂನೆಗಳು;
   - **"ಸದಸ್ಯ"** ಎಂದರೆ ಜಿಲ್ಲಾ ಪಂಚಾಯಿತಿ ಸದಸ್ಯ;
   - **"ಸ್ಥಾಯಿ ಸಮಿತಿ ಅಧ್ಯಕ್ಷ"** ಅಂದರೆ ಜಿಲ್ಲಾ ಪಂಚಾಯಿತಿಯ ಸದಸ್ಯರುಗಳಿಂದ ಚುನಾಯಿತ ಆಗುವ ಅಧ್ಯಕ್ಷರು/ಉಪಾಧ್ಯಕ್ಷರು, ಸ್ಥಾಯಿ ಸಮಿತಿ ಅಧ್ಯಕ್ಷರು, ಸದಸ್ಯರುಗಳಿಂದಲೇ ಚುನಾಯಿತರಾದ ಅಧ್ಯಕ್ಷರು;
   - **"ಪದನಿಮಿತ್ತ ಕಾರ್ಯದರ್ಶಿ"** ಎಂದರೆ ಸಾಮಾನ್ಯ ಸ್ಥಾಯಿ ಸಮಿತಿ ಪದನಿಮಿತ್ತ ಕಾರ್ಯದರ್ಶಿ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಆಗಿರುತ್ತಾರೆ. ಉಳಿದ ಸ್ಥಾಯಿ ಸಮಿತಿಗಳ ಪದನಿಮಿತ್ತ ಕಾರ್ಯದರ್ಶಿಯಾಗಿ ಉಪಕಾರ್ಯದರ್ಶಿಗಳನ್ನು ಹಾಗೂ ಆ ಹುದ್ದೆಗೆ ಸರಿಸಮನಾದ ಇತರ ಹುದ್ದೆಯ ಅಧಿಕಾರಿಗಳನ್ನು ನಾಮನಿರ್ದೇಶನ ಮಾಡಲಾಗುತ್ತದೆ.
   - **"ಪ್ರಕರಣ"** ಅಂದರೆ ಅಧಿನಿಯಮ ಪ್ರಕರಣ;
   - **"ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ"** ಅಂದರೆ ಚಿಕ್ಕಬಳ್ಳಾಪುರ ಜಿಲ್ಲಾ ಪಂಚಾಯತ್, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು;
   - **"ಗೊತ್ತುಪಡಿಸಿದ ಅಧಿಕಾರಿ"** ಎಂದರೆ ಚಿಕ್ಕಬಳ್ಳಾಪುರ ಜಿಲ್ಲಾ ಪಂಚಾಯತ್, ಉಪ ಕಾರ್ಯದರ್ಶಿ ಅಥವಾ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ನಾಮ ನಿರ್ದೇಶಿಸಿದ ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆಯಿಲ್ಲದ ಅಧಿಕಾರಿಯು 188ನೇ ಪ್ರಕರಣದ ಉದ್ದೇಶಕ್ಕಾಗಿ ಗೊತ್ತುಪಡಿಸಿದ ಅಧಿಕಾರಿಯಾಗಿರ ತಕ್ಕದ್ದು.
3. 

i. **ಸ್ಥಾಯಿ ಸಮಿತಿಗಳು:–** ಜಿಲ್ಲಾ ಪಂಚಾಯಿತಿಯು ಈ ಕೆಳಕಂಡ ಸ್ಥಾಯಿ ಸಮಿತಿಗಳನ್ನು ಹೊಂದಿರತಕ್ಕದ್ದು. ಎಂದರೆ
   - ಸಾಮಾನ್ಯ ಸ್ಥಾಯಿ ಸಮಿತಿ;
   - ಹಣಕಾಸು, ಲೆಕ್ಕಪರಿಶೋಧನೆ ಮತ್ತು ಯೋಜನಾ ಸ್ಥಾಯಿ ಸಮಿತಿ;
   - ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿ;
   - ಶಿಕ್ಷಣ ಮತ್ತು ಆರೋಗ್ಯ ಸ್ಥಾಯಿ ಸಮಿತಿ;
   - ಕೃಷಿ ಮತ್ತು ಕೈಗಾಗಿಕಾ ಸ್ಥಾಯಿ ಸಮಿತಿ;

ii. ಪ್ರತಿಯೊಂದು ಸ್ಥಾಯಿ ಸಮಿತಿಯ ಅಧ್ಯಕ್ಷರು ಸೇರಿದಂತೆ 7 ಮಂದಿಗಿಂತಲು ಹೆಚ್ಚಿಲ್ಲದಷ್ಟು ಸಂಖ್ಯೆಯ ಸದಸ್ಯರನ್ನು ಒಳಗೊಂಡಿರತಕ್ಕದ್ದು.

iii. ಸ್ಥಾಯಿ ಸಮಿತಿಯ ಸದಸ್ಯನ ಹುದ್ದೆಯ ಅವಧಿಯು ಈ ಅಧಿನಿಯಮದಲ್ಲಿ ಅನ್ಯಥಾ ಉಪಬಂಧಿಸಲಾದುದನ್ನು ಹೊರತುಪಡಿಸಿ ಚುನಾವಣೆ ದಿನಾಂಕದಿಂದ 20 ತಿಂಗಳು ಅಥವಾ ಅಧ್ಯಕ್ಷನ ಮತ್ತು ಉಪಾಧ್ಯಕ್ಷರ ಅವಧಿ 20 ತಿಂಗಳ ಮುಕ್ತಾಯವಾದ ನಂತರ, ಆತನು ಜಿಲ್ಲಾ ಪಂಚಾಯಿತಿ ಸದಸ್ಯನಾಗಿರುವುದು ನಿಂತು ಹೋಗುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಆ ಅವಧಿಯಾಗಿರತಕ್ಕದ್ದು.

iv. ಸಾಮಾಜಿಕ ನ್ಯಾಯ ಸಮಿತಿ ಕನಿಷ್ಠ ಪಕ್ಷ ಒಬ್ಬ ಮಹಿಳಾ ಸದಸ್ಯೆಯನ್ನು ಹಾಗೂ ಅನುಸೂಚಿತ ಪಂಗಡ / ಅನುಸೂಚಿತ ಜಾತಿಗೆ ಸೇರಿದ ಒಬ್ಬ ಸದಸ್ಯರನ್ನು ಹೊಂದಿರತಕ್ಕದ್ದು, ಯಾವನೇ ಒಬ್ಬ ಸದಸ್ಯರು 2ಕ್ಕಿಂತಲೂ ಹೆಚ್ಚು ಸ್ಥಾಯಿ ಸಮಿತಿಗಳ ಸದಸ್ಯನಾಗಿ ಸೇವೆ ಸಲ್ಲಿಸತಕ್ಕದ್ದಲ್ಲ.

4. **ಸಭೆ;** ಸ್ಥಾಯಿ ಸಮಿತಿ ಸದಸ್ಯರ ಚುನಾವಣೆಗಳನ್ನು ನಡೆಸುವ ಉದ್ದೇಶಕ್ಕಾಗಿ ಜಿಲ್ಲಾ ಪಂಚಾಯಿತಿಯು ಸಭೆಯನ್ನು ಕರೆಯತಕ್ಕದ್ದು. ಈ ಸ್ಥಾಯಿ ಸಮಿತಿಗಳನ್ನು ಪ್ರತಿಯೊಂದು ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಚುನಾವಣೆಯ ತರುವಾಯ ಮತ್ತು ಸ್ಥಾಯಿ ಸಮಿತಿಯ ಸದಸ್ಯರುಗಳ ಹುದ್ದೆಯ ಅವಧಿ ಮುಕ್ತಾಯವಾಗುವುದಕ್ಕೆ ನಿಕಟಪೂರ್ವದಲ್ಲಿ ನಡೆಸತಕ್ಕದ್ದು.

   ಸಭೆಯ ಆರಂಭದಲ್ಲಿ ಚುನಾವಣೆ ನಡೆಸುವ ಬಗ್ಗೆ ವಿವರಗಳನ್ನು ಆಯಾ ಸ್ಥಾಯಿ ಸಮಿತಿಯ ಗೊತ್ತುಪಡಿಸಿದ ಅಧಿಕಾರಿಗಳು ಸದಸ್ಯರುಗಳಿಗೆ ತಿಳಿಯಪಡಿಸಬೇಕು ರಹಸ್ಯ ಮತದಾನದ ಮೂಲಕ ಒಂದಾದ ಮೇಲೆ ಒಂದರಂತೆ ಪ್ರತಿಯೊಂದು ಸ್ಥಾಯಿ ಸಮಿತಿಗೂ ಚುನಾವಣೆ ನಡೆಸಬೇಕು.

5. **ಚುನಾವಣೆ ನೋಟೀಸ್;** ಸ್ಥಾಯಿ ಸಮಿತಿಯ ಸದಸ್ಯರ ಚುನಾವಣೆ ಜರುಗಿಸುವ ಕುರಿತು ಸಭೆಯನ್ನು ಕರೆದ ದಿನಾಂಕದಂದು ಗೊತ್ತುಪಡಿಸಿದ ಅಧಿಕಾರಿಯು ಸ್ಥಾಯಿ ಸಮಿತಿ ಸದಸ್ಯರ ಚುನಾವಣೆ ನಡೆಸತಕ್ಕದ್ದು ಮತ್ತು ಅದನ್ನು ಹಾಗೆ ನಿಗದಿಪಡಿಸಿದ ಬಗ್ಗೆ 7 ದಿನಗಳಿಗೆ ಕಡಿಮೆ ಇಲ್ಲದಂತೆ ನೋಟೀಸನ್ನು ಪ್ರತಿಯೊಬ್ಬ ಸದಸ್ಯನಿಗೂ ನೀಡತಕ್ಕದ್ದು.

6. **ಕೋರಂ:** ಸ್ಥಾಯಿ ಸಮಿತಿಗಳ ಸದಸ್ಯರ ಚುನಾವಣೆ ಕುರಿತು ಕರೆದ ಸಭೆಗೆ ಜಿಲ್ಲಾ ಪಂಚಾಯಿತಿಯು ಒಟ್ಟು ಸದಸ್ಯರ ಅರ್ಧದಷ್ಟು ಸಭೆಯ ಕಾರ್ಯಕಲಾಪಗಳನ್ನು ನಿರ್ವಹಿಸುವುದಕ್ಕಾಗಿ ಕೋರಂ ಆಗಿರತಕ್ಕದ್ದು.

ಸಭೆಗೆ ಗೊತ್ತುಪಡಿಸಿದ ಕಾಲದಲ್ಲಿ ಕೋರಂ ಇರದಿದ್ದರೆ ಗೊತ್ತುಪಡಿಸಿದ ಅಧಿಕಾರಿಯು 30 ನಿಮಿಷಗಳ ವರೆಗೆ ಕಾಯತಕ್ಕದ್ದು ಮತ್ತು ಅಂತಹ ಅವಧಿಯಲ್ಲೂ ಕೋರಂ ಇಲ್ಲದಿದ್ದರೆ ಸಭೆಯನ್ನು ಮಾರನೇ ದಿನದಂದು ಅಥವಾ ತರುವಾಯದ ದಿನದಂದು ಅವರು ನಿಗಧಿ ಪಡಿಸಿದ ಕಾಲಕ್ಕೆ ಮುಂದೂಡತಕ್ಕದ್ದು, ಹಾಗೇ ನಿಗಧಿಪಡಿಸಿದ ಸಭೆಯ ಬಗ್ಗೆ ನೋಟೀಸನ್ನು ಜಿಲ್ಲಾ ಪಂಚಾಯಿತಿಯ ಕಛೇರಿಯ ನೋಟೀಸ್ ಬೋರ್ಡ್‌ಗೆ ಅಂಟಿಸತಕ್ಕದ್ದು. ಹಾಗೇ ಮುಂದೂಡಿದ ಸಭೆಯಲ್ಲಿ ಮೂಲಸಭೆಯ ಮುಂದೆ ಇದ್ದ ಕಾರ್ಯಕಲಾಪವನ್ನು ನಡೆಸತಕ್ಕದ್ದು. ಮುಂದೂಡಿದ ಸಭೆಯಲ್ಲಿ ಕೋರಂನ ಅವಶ್ಯಕತೆ ಇರುವುದಿಲ್ಲ.

7. **ನಾಮಪತ್ರಗಳನ್ನು ಸಲ್ಲಿಸುವುದು;** ಸ್ಥಾಯಿ ಸಮಿತಿಯ ಸದಸ್ಯರ ಚುನಾವಣೆಗಾಗಿ 5ನೇ ವಿನಿಯಮದ ಮೇರೆಗೆ ಸಭೆ ಸೇರಲು ನಿಗಧಿಪಡಿಸಿದ ವೇಳೆಗೆ ಮುಂಚೆ 2 ಗಂಟೆಗಿಂತ ಕಡಿಮೆ ಇಲ್ಲದಂತೆ ಅಂದರೆ ಸಭೆಯನ್ನು 12 ಗಂಟೆ ನಿಗಧಿಪಡಿಸಿದ್ದಲ್ಲಿ (10 ಗಂಟೆ ಒಳಗೆ) ಯಾರೊಬ್ಬ ಸದಸ್ಯರನ್ನು ಗೊತ್ತುಪಡಿಸಿದ ಅಧಿಕಾರಿಗೆ ನಮೂನೆ 1ರಲ್ಲಿ ನಾಮನಿರ್ದೇಶನ ಪತ್ರ ಸಲ್ಲಿಸುವದರ ಮೂಲಕ ಸಂದರ್ಭಾನುಸಾರ ಸ್ಥಾಯಿ ಸಮಿತಿ ಸದಸ್ಯನನ್ನಾಗಿ ಆಯ್ಕೆಮಾಡಬೇಕೆಂದು ಯಾವನೇ ಇತರ ಸದಸ್ಯರನ್ನು ನಾಮನಿರ್ದೇಶನ ಮಾಡಬಹುದು.

ಒಬ್ಬರಿಗಿಂತ ಹೆಚ್ಚು ಸದಸ್ಯರನ್ನು ನಾಮನಿರ್ದೇಶನ ಮಾಡಬಾರದು.

ಒಬ್ಬ ಸದಸ್ಯನು ಒಬ್ಬ ಅಭ್ಯರ್ಥಿಗಿಂತ ಹೆಚ್ಚಿನ ನಾಮನಿರ್ದೇಶನ ಮಾಡಿದಲ್ಲಿ ಗೊತ್ತುಪಡಿಸಿದ ಅಧಿಕಾರಿಗಳು ಮೊದಲು ಸ್ವೀಕರಿಸಿದ ನಾಮನಿರ್ದೇಶನ ಪತ್ರವನ್ನು ಮಾತ್ರ ಪರಿಶೀಲನೆಗಾಗಿ ಪರಿಗಣಿಸತಕ್ಕದ್ದು.

8. **ನಾಮಪತ್ರಗಳ ಪರಿಶೀಲನೆ;** ಸಭೆಯು ಪ್ರಾರಂಭವಾದ ನಂತರ ಗೊತ್ತುಪಡಿಸಿದ ಅಧಿಕಾರಿಯು 7ನೇ ನಿಯಮದ ಮೇರೆಗೆ ತನಗೆ ಒಪ್ಪಿಸಿರುವ ಸ್ಥಾಯಿ ಸಮಿತಿಯ ಸದಸ್ಯರ ಎಲ್ಲಾ ನಾಮಪತ್ರಗಳನ್ನು ಅನುಕ್ರಮವಾಗಿ ಪರಿಶೀಲಿಸತಕ್ಕದ್ದು ಮತ್ತು ಯಾರು ವಿದ್ಯುಕ್ತವಾಗಿ ಸಲ್ಲಿಸಿರುವರೆಂದು ತಾನು ಅಭಿಪ್ರಾಯಪಡುವ ಸದಸ್ಯರ ಹೆಸರುಗಳನ್ನು ಹಾಗೂ ಸೂಚಿಸಿದವರ ಹೆಸರುಗಳೊಂದಿಗೆ ನಾಮಪತ್ರಗಳ ಕ್ರಮಬದ್ಧತೆಯ ಬಗ್ಗೆ ಸಭೆಯಲ್ಲಿ ಹಾಜರಿರುವ ಸದಸ್ಯರ ಮುಂದೆ ಓದತಕ್ಕದ್ದು.

9. **ಉಮೇದುವಾರಿಕೆಯನ್ನು ಹಿಂತೆಗೆದುಕೊಳ್ಳುವುದು;**

(1) 8ನೇ ಪ್ರಕರಣದ ಮೇರೆಗೆ ನಾಮಪತ್ರಗಳ ಪರಿಶೀಲನೆಯಾದ ಕೂಡಲೇ ಯಾರೇ ಅಭ್ಯರ್ಥಿಯು ರುಜುಮಾಡಿದ ಲಿಖಿತ ನೋಟೀಸಿನ ಮೂಲಕ ಗೊತ್ತುಪಡಿಸಿದ ಅಧಿಕಾರಿಗೆ ಅದನ್ನು ಸಲ್ಲಿಸಿ ತನ್ನ ಉಮೇದುವಾರಿಕೆಯನ್ನು ಹಿಂತೆಗೆದುಕೊಳ್ಳಬಹುದು.

(2) ಅಭ್ಯರ್ಥಿಯು ಖುದ್ದಾಗಿಯಾಗಲೀ ಅಥವಾ ಅಭ್ಯರ್ಥಿಯಿಂದ ಈ ಸಂದರ್ಭದಲ್ಲಿ ಪ್ರಾಧೀಕೃತವಾದ ಸೂಚಕನ ಮೂಲಕವಾಗಲೀ ನೋಟೀಸು ನೀಡಬಹುದು.

(3) ಯಾರೇ ವ್ಯಕ್ತಿಯು (1) ನೇ ಉಪ–ನಿಯಮದ ಮೇರೆಗೆ ತನ್ನ ಉಮೇದುವಾರಿಕೆಯನ್ನು ಹಿಂತೆಗೆದುಕೊಳ್ಳುವ ನೋಟೀಸನ್ನು ನೀಡಿದ ನಂತರ ಹಾಗೆ ಹಿಂತೆಗೆದುಕೊಳ್ಳುವ ನೋಟೀಸನ್ನು ರದ್ದುಪಡಿಸಲು ಅವಕಾಶ ನೀಡತಕ್ಕದ್ದಲ್ಲ.

(4) ಗೊತ್ತುಪಡಿಸಿದ ಅಧಿಕಾರಿಯು ಹಿಂತೆಗೆದುಕೊಳ್ಳುವ ನೋಟೀಸಿನ ಪ್ರಾಮಾಣಿಕತೆಯ ಬಗ್ಗೆ ಮತ್ತು (2)ನೇ ಉಪ–ನಿಯಮದ ಮೇರೆಗೆ ಅದನ್ನು ಒಪ್ಪಿಸುತ್ತಿರುವ ವ್ಯಕ್ತಿಯ ಗುರುತಿನ ಬಗ್ಗೆ ಮನದಟ್ಟಾದ ತರುವಾಯ ತಮ್ಮ ಉಮೇದುವಾರಿಕೆಯನ್ನು ಹಿಂತೆಗೆದುಕೊಳ್ಳುವ ವ್ಯಕ್ತಿಗಳ ಹೆಸರನ್ನು ಅಂತಹ ಸಭೆಯಲ್ಲಿ ಹಾಜರಿರುವ ಸದಸ್ಯರ ಮುಂದೆ ಓದತಕ್ಕದ್ದು.

(5) ಹಿಂತೆಗೆದುಕೊಳ್ಳುವ ಅವಧಿಯು ಮುಕ್ತಾಯವಾದ ನಂತರ ಆಯಾ ಸ್ಥಾಯಿ ಸಮಿತಿಗೆ ಚುನಾಯಿಸತಕ್ಕ ಸದಸ್ಯರ ಸಂಖ್ಯೆಯಷ್ಟು ಕ್ರಮ ಬದ್ದವಾದ ಅಭ್ಯರ್ಥಿಗಳು ಕಣದಲ್ಲಿ ಉಳಿದರೆ ಅಂತಹ ಅಭ್ಯರ್ಥಿಗಳು ಆಯಾ ಸಮಿತಿಗಳಿಗೆ ಅವಿರೋಧವಾಗಿ ಆಯ್ಕೆಯಾಗಿದ್ದಾರೆಂದು ಘೋಷಿಸತಕ್ಕದ್ದು.

(6) ನಾಮಪತ್ರಗಳು ಕ್ರಮಬದ್ದವಾಗಿರುವ ಮತ್ತು ಅವರು ತಮ್ಮ ಉಮೇದುವಾರಿಕೆಯನ್ನು ಹಿಂತೆಗೆದುಕೊಳ್ಳದೇ ಆಯಾ ಸ್ಥಾಯಿ ಸಮಿತಿಗಳಿಗೆ ಚುನಾಯಿಸತಕ್ಕ ಸದಸ್ಯರ ಸಂಖ್ಯೆಗಳಿಗಿಂತ ಹೆಚ್ಚಿಗೆ ಇದ್ದರೆ ಗೊತ್ತುಪಡಿಸಿದ ಅಧಿಕಾರಿಯು ಚುನಾವಣೆಯನ್ನು ಗುಪ್ತ ಮತದಾನ ಪದ್ಧತಿಯಂತೆ, ಈ ಕೆಳಗಿನಂತೆ ಮುಂದುವರಿಸತಕ್ಕದ್ದು.

(7) ಗೊತ್ತುಪಡಿಸಿದ ಅಧಿಕಾರಿಯು ಸಾರ್ವತ್ರಿಕ ಚುನಾವಣೆಯಲ್ಲಿ ಬಳಸಿದ ಮತಪೆಟ್ಟಿಗೆಯ ವಿನ್ಯಾಸವನ್ನೇ ಹೊಂದಿರುವ ಮತಪೆಟ್ಟಿಗೆಯನ್ನು ಸ್ಥಾಯಿ ಸಮಿತಿ ಸದಸ್ಯರ ಚುನಾವಣೆಯಲಿ ಉಪಯೋಗಿಸತಕ್ಕದ್ದು ಮತ್ತು ಅದನ್ನು ಅಭ್ಯರ್ಥಿಗಳ ಸಮ್ಮುಖದಲ್ಲಿಯೇ ಬೀಗ ಹಾಕಿ ಮೊಹರು ಹಾಕತಕ್ಕದ್ದು.

(8) ಜಿಲ್ಲಾ ಪಂಚಾಯಿತಿ ಸದಸ್ಯರ ಯಾದಿಯನ್ನು ಮತಪತ್ರ ಹಂಚಲು ಮತದಾರ ಪಟ್ಟಿ ಅಂತಾ ಉಪಯೋಗಿಸತಕ್ಕದ್ದು.

10. ಮತ ಚಲಾಯಿಸಲು ಇಚ್ಚಿಸುವ ಪ್ರತಿಯೊಬ್ಬ ಸದಸ್ಯನಿಗೆ ನಮೂನೆ 2ರಲ್ಲಿಯ ಮತಪತ್ರಗಳನ್ನು ಒದಗಿಸತಕ್ಕದ್ದು, ಮತಪತ್ರಗಳಿಗೆ ಗೊತ್ತುಪಡಿಸಿದ ಅಧಿಕಾರಿಯು ಸಹಿ ಮಾಡಿರತಕ್ಕದ್ದು ಎರಡು ಮಾದರಿ ಮತಪತ್ರಗಳನ್ನು ನಮೂನೆ 2ರಲ್ಲಿ ತಯಾರಿಸಿ ಎಲ್ಲಾ ಪುರುಷ ಮತ್ತು ಮಹಿಳಾ ಸದಸ್ಯರಿಗೆ ತೋರಿಸಿ ಆಯಾ ಸ್ಥಾಯಿ ಸಮಿತಿಗೆ ಸ್ಪರ್ಧಿಸಿದ ಸದಸ್ಯರ ಪೈಕಿ ಎಷ್ಟು ಸದಸ್ಯರನ್ನು ಚುನಾಯಿಸಬೇಕಾಗಿದೆ ಅಷ್ಟಕ್ಕೆ ಮಾತ್ರ ಮತ ಚಲಾಯಿಸತಕ್ಕದ್ದು ಅಂತಾ ತಿಳಿಸಿ ಹೇಳಬೇಕು ಚುನಾಯಿಸಲು ನಿಗದಿಪಡಿಸಿದ ಸದಸ್ಯರ ಸಂಖ್ಯೆಗಿಂತ ಹೆಚ್ಚಿನ ಅಭ್ಯರ್ಥಿಗಳ ಹೆಸರಿನ ಮುಂದೆ ಮತ ಚಲಾಯಿಸಿದರೆ ಅಂತಹ ಮತ ಅಸಿಂಧುವಾಗತಕ್ಕದ್ದು.

11. (1) ಮತಪತ್ರ ಸ್ವೀಕರಿಸಿದ ಮೇಲೆ ಸದಸ್ಯನು ವೋಟಿಂಗ್ ಕಂಪಾರ್ಟ್‌ಮೆಂಟಿಗೆ ಪ್ರವೇಶಿಸಿ ಎಷ್ಟು ಅಭ್ಯರ್ಥಿಗಳನ್ನು ಚುನಾಯಿಸಬೇಕಾಗಿದೆ ಅಷ್ಟು ಅಭ್ಯರ್ಥಿಗಳ ಹೆಸರಿನ ಮುಂದೆ ಕ್ರಾಸ್ (x) ಮಾಡಿ ಮತ ನೀಡಿ ಮತಪತ್ರವನ್ನು ಮಡಿಸಿ, ಮತಪೆಟ್ಟಿಗೆಯಲ್ಲಿ ಹಾಕತಕ್ಕದ್ದು.

(2) ಮತದಾರನು ಅನಕ್ಷರಸ್ಥನಾಗಿದ್ದು ಅಥವಾ ಕುರುಡನಾಗಿದ್ದು ಮತಪತ್ರದ ಮೇಲೆ ಕ್ರಾಸ್ ಮಾಡಲು ಸಾಧ್ಯವಾಗದಿದ್ದರೆ ಗೊತ್ತುಪಡಿಸಿದ ಅಧಿಕಾರಿ ಮತದಾರನ ಇಚ್ಚೆಗನುಸಾರ ಮತಪತ್ರದ ಮೇಲೆ ಮತವನ್ನು ದಾಖಲು ಮಾಡತಕ್ಕದ್ದು.

(3) ಈ ಉಪ–ನಿಯಮದಡಿಯಲ್ಲಿ ಕೆಲಸ ಮಾಡುವಾಗ ಗೊತ್ತುಪಡಿಸಿದ ಅಧಿಕಾರಿಯು ರಹಸ್ಯವನ್ನು ಕಾಪಾಡತಕ್ಕದ್ದು.

12. **ಮತಗಳ ಎಣಿಕೆ:**

(1) ಹಾಜರಿರುವ ಮತ್ತು ಮತ ಚಲಾಯಿಸುಲು ಇಚ್ಚಿಸುವ ಇಲ್ಲಾ ಸದಸ್ಯರು ಮತದಾನ ಮಾಡಿದ ನಂತರ ಗೊತ್ತುಪಡಿಸಿದ ಅಧಿಕಾರಿಯು ಹಾಜರಿರುವ ಎಲ್ಲಾ ಸದಸ್ಯರ ಸಮ್ಮುಖದಲಿ ಮತಪೆಟ್ಟಿಗೆಯನ್ನು ತೆರದು ಮತಪತ್ರಗಳನ್ನು ಹೊರಗೆ ತೆಗೆದು ಎಣಿಸತಕ್ಕದ್ದು ಮತ್ತು ಪರಿಶೀಲಿಸಿ ಸಿಂಧುವಾದ ಮತಗಳನ್ನು ಆಯಾ ಅಭ್ಯರ್ಥಿಗಳ ಹೆಸರಿನ ಟ್ರೇಗಳಲ್ಲಿ ಹಾಕತಕ್ಕದ್ದು ಅಸಿಂಧುವಾದ ಮತಪತ್ರಗಳನ್ನು ತಿರಸ್ಕರಿಸತಕ್ಕದ್ದು.

(2) ಗೊತ್ತುಪಡಿಸಿದ ಅಧಿಕಾರಿಯು:–

I. ಮತದಾರರನ್ನು ಗುರುತಿಸಬಹುದಾದಂತ ಯಾವುದೇ ಗುರುತು ಅಥವಾ ಬರಹವು ಮತಪತ್ರದ ಮೇಲೆ ಇದ್ದರೆ;

II. ಅದರ ಮೇಲೆ ಯಾವುದೇ ಮತ ಚಲಾಯಿಸದಿದ್ದರೆ;

III. ಚುನಾಯಿಸಬೇಕಾಗಿದ್ದ ಸದಸ್ಯರ ಸಂಖ್ಯೆಗಿಂತ ಹೆಚ್ಚಿನ ಸಂಖ್ಯೆಯ ಅಭ್ಯರ್ಥಿಗಳ ಹೆಸರಿಗೆ ಮತ ಚಲಾಯಿಸಿದ್ದರೆ;

IV. ಅದರ ಮೇಲೆ ಯಾವ ಅಭ್ಯರ್ಥಿಗೆ ಮತ ಚಲಾಯಿಸಲಾಗಿದೆ ಎಂಬ ಬಗ್ಗೆ ಸ್ಪಷ್ಟವಾಗಿರದಿದ್ದರೆ;

V. ಚುನಾಯಿಸಬೇಕಾದ ಅಭ್ಯರ್ಥಿ ಹೆಸರಿನ ಮುಂದೆ (x) ಕ್ರಾಸ್ ಬಿಟ್ಟು ಬೇರೆ ರೀತಿಯಲ್ಲಿ ಮಾರ್ಕ ಮಾಡಿದ್ದರೆ, ಅಂತಹ ಮತಪತ್ರಗಳನ್ನು ತಿರಸ್ಕರಿಸತಕ್ಕದ್ದು.

(3) ಉಪ–ನಿಯಮ (2)ರ ಅಡಿಯಲ್ಲಿ ಯಾವುದೇ ಮತಪತ್ರವನ್ನು ತಿರಸ್ಕರಿಸುವುದಕ್ಕೆ ಮುಂಚೆ ಗೊತ್ತುಪಡಿಸಿದ ಅಧಿಕಾರಿಯು ಮತಪತ್ರವನ್ನು ಪರಿಶೀಲಿಸುವುದಕ್ಕೆ ಪ್ರತಿಯೊಬ್ಬ ಅಭ್ಯರ್ಥಿಗೆ ಅವಕಾಶ ನೀಡತಕ್ಕದ್ದು ಆದರೆ, ಅದನ್ನು ಅವರ ಕೈಗೆ ಕೊಡಬಾರದು

(4) ತಿರಸ್ಕೃತವಾದ ಮತಪತ್ರಗಳನ್ನು ಒಂದು ಪ್ರತ್ಯೇಕ ಪಾಕೇಟಲ್ಲಿ ಇಡಬೇಕು. ಸಿಂದುವಾದ ಮತಗಳ ಎಣಿಕೆ ಪೂರ್ಣಗೊಂಡ ನಂತರ ಗೊತ್ತುಪಡಿಸಿದ ಅಧಿಕಾರಿಯು ಪ್ರತಿಯೊಬ್ಬ ಅಭ್ಯರ್ಥಿಗಳಿಗೆ ದೊರೆತ ಮತಗಳ ಸಂಖ್ಯೆಯನ್ನು ವಿವರಣಾ ಪಟ್ಟಿಯಲ್ಲಿ ದಾಖಲು ಮಾಡತಕ್ಕದ್ದು, ಮತ್ತು ಅದರ ಪ್ರಕಾರ ಘೋಷಿಸತಕ್ಕದ್ದು. ಸಿಂದುವಾದ ಮತಪತ್ರಗಳನ್ನು ಆಯಾ ಅಭ್ಯರ್ಥಿವಾರು ಲಕೋಟೆಯಲ್ಲಿ ಹಾಕಿ ಮೊಹರು ಮಾಡತಕ್ಕದ್ದು.

(5) ಅಂಥ ಘೋಷಣೆಯನ್ನು ಮಾಡಿದ ನಂತರ ಗೊತ್ತಪಡಿಸಿದ ಅಧಿಕಾರಿಯು ಸ್ವತಃ ತಾನಾಗಿಯೇ ಅಥವಾ ಮರುಎಣಿಕೆ ಮಾಡಬೇಕೆಂದು ಯಾರೇ ಅಭ್ಯರ್ಥಿ ಸೂಚನೆ ಮೇರೆಗೆ ಮತಗಳ ಮರುಎಣಿಕೆ ಮಾಡಬಹುದು ಪರಂತು, ಇದರಲ್ಲಿ ಏನೇ ಒಳಗೊಂಡಿದ್ದರೂ ಅವೇ ಮತಗಳನ್ನು ಒಂದಕ್ಕಿಂತ ಹೆಚ್ಚುಬಾರಿ ಮರುಎಣಿಕೆ ಮಾಡುವಂತೆ ಗೊತ್ತುಪಡಿಸಿದ ಅಧಿಕಾರಿಯನ್ನು ಕಡ್ಡಾಯ ಮಾಡತಕ್ಕದ್ದಲ್ಲ.

(6) 5ನೇ ಉಪ–ನಿಯಮದಲ್ಲಿ ಹೇಳಿದಂತೆ ಮತಗಳ ಮರುಎಣಿಕೆ ಮಾಡಿದಾಗ ಗೊತ್ತುಪಡಿಸಿದ ಅಧಿಕಾರಿಯು ಅಂತಹ ಮರುಎಣಿಕೆ ಮಾಡಿದ ನಂತರ ಅವಶ್ಯಕ ಇರುವಷ್ಟರ ಮಟ್ಟಿಗೆ (4)ನೇ ಉಪ–ನಿಯಮದಲ್ಲಿ ಉಲ್ಲೇಖಿಸಿರುವ ವಿವರಣಾ ಪಟ್ಟಿಯನ್ನು ತಿದ್ದುಪಡಿಯನ್ನು ಮಾಡತಕ್ಕದ್ದು ಮತು ಹಾಗೆ ಮಾಡಿದ ತಿದ್ದುಪಡಿಯನ್ನು ಘೋಷಿಸತಕ್ಕದ್ದು.

(7) ಗೊತ್ತಪಡಿಸಿದ ಅಧಿಕಾರಿಯು ಮತಗಳ ಎಣಿಕೆ ಅಥವಾ ಸಂದರ್ಭಾನುಸಾರ ಮರುಎಣಿಕೆ ಮಾಡಿದ ನಂತರ ಅತೀ ಹಚ್ಚು ಸಂಖ್ಯೆಯ ಸಿಂಧುವಾದ ಮತಗಳನ್ನು ಗಳಿಸಿರುವ ಅಭ್ಯರ್ಥಿಗಳನ್ನು ಆಯಾ ಸ್ಥಾಯಿ ಸಮಿತಿ ಸದಸ್ಯರೆಂದು, ಚುನಾಯಿತರಾಗಿದ್ದಾರಂದು ವಿದ್ಯುಕ್ತವಾಗಿ ಆಯ್ಕೆ ಆಗಿದ್ದಾರೆಂದು ಘೋಷಿಸತಕ್ಕದ್ದು.

(8) ಮತಗಳ ಎಣಿಕೆ ಪೂರ್ಣಗೊಂಡ ನಂತರ ಇಬ್ಬರು ಅಥವಾ ಹೆಚ್ಚು ಅಭ್ಯರ್ಥಿಗಳಿಗೆ ಸಮಾನ ಮತಗಳ ದೊರೆತಿರುವುದು ಕಂಡು ಬಂದರೆ ಆಗ ಗೊತಪಡಿಸಿದ ಅಧಿಕಾರಿಯು ತಾನು ನಿರ್ಧರಿಸಬಹುದಾದ ರೀತಿಯಲ್ಲಿ ಚೀಟಿ ಎತ್ತುವ ಮೂಲಕ ಆ ಅಭ್ಯರ್ಥಿಗಳ ನಡುವೆ ಆಯ್ಕೆಯನ್ನು ತೀರ್ಮಾನಿಸತಕ್ಕದ್ದು ಮತ್ತು ಯಾವ ಅಭ್ಯರ್ಥಿ ಪರವಾಗಿ ಚೀಟಿಯು ಬರುವುದೋ ಅವನು ಒಂದು ಹೆಚ್ಚಿನ ಮತವನ್ನು ಪಡೆದಿದ್ದರೆ ಹೇಗೋ ಎಂಬಂತೆ ಅಧಿಕ ಮತವನ್ನು ಪಡೆದ ಅಭ್ಯರ್ಥಿಯು ಚುನಾಯಿತನಾಗಿದ್ದಾನೆಂದು ಘೋಷಿಸತಕ್ಕದ್ದು.

(9) ಗೊತ್ತುಪಡಿಸಿದ ಅಧಿಕಾರಿಯು ಚುನಾವಣೆ ವರದಿಯನ್ನು ತಯಾರಿಸ ತಕ್ಕದ್ದು ಮತ್ತು ಪ್ರಮಾಣಿಕರಿಸತಕ್ಕದ್ದು ಮತ್ತು ಸದರಿ ಚುನಾವಣೆಗೆ ಸಂಭಂದಿಸಿದ ದಾಖಲೆಗಳನ್ನು ಸುರಕ್ಷಿತವಾಗಿ 6 ತಿಂಗಳು ಇಟ್ಟುಕೊಳ್ಳತಕ್ಕದ್ದು.

(10) ಕಾರಣಾಂತರಗಳಿಂದ ಸ್ಥಾಯಿ ಸಮಿತಿ ಸದಸ್ಯನ ಸ್ಥಾನ ಖಾಲಿಯಾದರೆ ಅಂತಹ ಸಮಯದಲ್ಲಿ ಉಳಿದ ಅವಧಿಗೆ ಬೇರೊಬ್ಬ ಸದಸ್ಯನನ್ನು ಚುನಾಯಿಸತಕ್ಕದ್ದು.

(11) **ಸಭೆಯ ನಡವಳಿಕೆಗಳು:** ಗೊತ್ತುಪಡಿಸಿದ ಅಧಿಕಾರಿಯೂ ಸ್ಥಾಯಿ ಸಮಿತಿಗೆ ಸದಸ್ಯರ ಚುನಾವಣೆ ಕಾರ್ಯಕಾಲಪ ಜರುಗಿಸಿದ ಬಗ್ಗೆ ಎಲ್ಲಾ ವಿವರಗಳನ್ನೊಳಗೊಂಡಂತೆ ನಡುವಳಿಕೆ ದಾಖಲು ಮಾಡಿ ಸಹಿ ಮಾಡತಕ್ಕದ್ದು ಮತ್ತು ಯಾರೇ ಸದಸ್ಯರು ಅದನ್ನು ತಪಾಸಣೆ ಮಾಡಲು ದೊರೆಯುವಂತೆ ಮಾಡತಕ್ಕದ್ದು.

(12) **ಚುನಾವಣಾ ಅರ್ಜಿ;** ಯಾರೇ ಸದಸ್ಯರು (7) ಮತ್ತು (8)ನೇ ಉಪ ನಿಯಮದ ಮೇರೆಗೆ ಚುನಾವಣಾ ಪಲಿತಾಂಶವನ್ನು ಘೋಷಿಸಿದ ದಿನಾಂಕದಿಂದ 15 ದಿವಸಗಳ ಒಳಗಾಗಿ ಸ್ಥಾಯಿ ಸಮಿತಿ ಸದಸ್ಯರ ಚುನಾವಣೆಯ ಸಿಂಧುತ್ವವನ್ನು ಯಾರ ಅಧಿಕಾರ ವ್ಯಾಪ್ತಿಯೊಳಗೆ ಜಿಲ್ಲಾ ಪಂಚಾಯಿತಿಯು ಬರುವುದೊ ಆ ಜಿಲ್ಲಾ ನ್ಯಾಯಾದೀಶರ ಮುಂದೆ ರೂ.2000.00 ಠೇವಣಿಯನ್ನು ಭದ್ರತೆಗಾಗಿ ಇಟ್ಟು ಚುನಾವಣಾ ಅರ್ಜಿಯನ್ನು ಸಲ್ಲಿಸುವ ಮೂಲಕ ಪ್ರಶ್ನಿಸಬಹುದು.

**ನಮೂನೆ 1**

**ನಾಮಪತ್ರ**

**(7ನೇ ವಿನಿಯಮ ನೋಡಿ)**

ಜಿಲ್ಲಾ ಪಂಚಾಯಿತಿಯ ಚಿಕ್ಕಬಳ್ಳಾಪುರ –––––– ಸ್ಥಾಯಿ ಸಮಿತಿಯ ಸದಸ್ಯರ ಚುನಾವಣೆ––––––ಸ್ಥಾಯಿ ಸಮಿತಿಯ ಸದಸ್ಯರ ಆಯ್ಕೆಗೆ ಅಭ್ಯರ್ಥಿಯನ್ನಾಗಿ–––––––– ಇವರನ್ನು ನಾನು ಈ ಮೂಲಕ ನಾಮ ನಿರ್ದೇಶನ ಮಾಡಿದ್ದೇನೆ.

ಅಭ್ಯರ್ಥಿಯ ಪೂರ್ಣ ಹೆಸರು

ಅಭ್ಯರ್ಥಿಯ ಪೂರ್ಣ ವಿಳಾಸ

ಅಭ್ಯರ್ಥಿಯು ಜಿಲ್ಲಾ ಪಂಚಾಯಿತಿ ಸದಸ್ಯನಾಗಿ

ಆಯ್ಕೆಯಾಗಿರುವ ಕ್ಷೇತ್ರದ ಹೆಸರು, ವಿಭಾಗದ ಹೆಸರು

ಸೂಚಕರು ಜಿಲ್ಲಾ ಪಂಚಾಯತ್ ಸದಸ್ಯರಾಗಿ

ಆಯ್ಕೆಯಾದ ಕ್ಷೇತ್ರದ ಹೆಸರು, ವಿಭಾಗದ ಹೆಸರು

ಸ್ಥಳ: ಚಿಕ್ಕಬಳ್ಳಾಪುರ

ದಿನಾಂಕ: (ಸೂಚಕರ ಸಹಿ)

––––––––––––––––––––––––––––––––––––––––––––––––––––––––––––––––––––––––

**ಅಭ್ಯರ್ಥಿಯ ಘೋಷಣೆ**

--------- ಸ್ಥಾಯಿ ಸಮಿತಿಯ ಸದಸ್ಯನಾಗಿ ಚುನಾಯಿತನಾದರೆ ಆ ಸಮಿತಿಯಲ್ಲಿ ಕಾರ್ಯನಿರ್ವಹಿಸುವುದಾಗಿ ನಾನು ಈ ಮೂಲಕ ನನ್ನ ಒಪ್ಪಿಗೆ ಸೂಚಿಸಿದ್ದೇನೆ.

ಸ್ಥಳ: ಚಿಕ್ಕಬಳ್ಳಾಪುರ **ಅಭ್ಯರ್ಥಿಯ ಸಹಿ**

ದಿನಾಂಕ:

(ಗೊತ್ತುಪಡಿಸಿದ ಅಧಿಕಾರಿ ಭರ್ತಿಮಾಡಬೇಕು)

ನಾಮಪತ್ರ ಕ್ರಮ ಸಂಖ್ಯೆ ..................

ಈ ನಾಮಪತ್ರವನ್ನು ___________(ಹೆಸರು) ಅಭ್ಯರ್ಥಿ/ಸೂಚಕ __________ದಿನಾಂಕ______ಗಂಟೆಗೆ ನನಗೆ ಒಪ್ಪಿಸಿದ್ದಾರೆ.

ಸ್ಥಳ: ಚಿಕ್ಕಬಳ್ಳಾಪುರ **ಗೊತ್ತುಪಡಿಸಿದ ಅಧಿಕಾರಿ**

ದಿನಾಂಕ:

ನಾಮಪತ್ರವನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವುದು ಗೊತ್ತುಪಡಿಸಿದ ಅಧಿಕಾರಿಯ ತೀರ್ಮಾನ.

ಸ್ಥಳ: ಚಿಕ್ಕಬಳ್ಳಾಪುರ

ದಿನಾಂಕ: **ಗೊತ್ತುಪಡಿಸಿದ ಅಧಿಕಾರಿ**

---

**ನಾಮಪತ್ರ ಸ್ವೀಕೃತಿ ಮತ್ತು ಪರಿಶೀಲನಾ ನೋಟೀಸ್**

**(ನಾಮಪತ್ರ ಸಲ್ಲಿಸುವ ವ್ಯಕ್ತಿಗೆ ನೀಡಬೇಕಾದದ್ದು)**

ನಾಮಪತ್ರ ಕ್ರಮ ಸಂಖ್ಯೆ_________ಅಭ್ಯರ್ಥಿ/ಸೂಚಕರು_________ಜಿಲ್ಲಾ ಪಂಚಾಯಿತಿ________ಚುನಾವಣೆಗಾಗಿ ಅಭ್ಯರ್ಥಿಯಾದ______ರವರ ನಾಮಪತ್ರವನ್ನು _________ದಿನಾಂಕದಂದು ________ಗಂಟೆಗೆ ನನಗೆ ಒಪ್ಪಸಿದ್ದಾರೆ.

ಎಲ್ಲಾ ನಾಮಪತ್ರಗಳನ್ನು __________ದಿನಾಂಕದಂದು _________ಗಂಟೆಗೆ ಜಿಲ್ಲಾ ಪಂಚಾಯಿತಿ_______ಸಭಾಗೃಹದಲ್ಲಿ ಪರಿಶೀಲನೆಗಾಗಿ ತೆಗೆದುಕೊಳ್ಳುವುದು.

ಸ್ಥಳ: ಚಿಕ್ಕಬಳ್ಳಾಪುರ

ದಿನಾಂಕ: **ಗೊತ್ತುಪಡಿಸಿದ ಅಧಿಕಾರಿ**

**ನಮೂನೆ 2**

**ಮತ ಪತ್ರ**

**(10ನೇ ವಿನಿಯಮ)**

ಮತಪತ್ರ ಕ್ರಮ ಸಂಖ್ಯೆ:_________

ಜಿಲ್ಲಾ ಪಂಚಾಯಿತಿ, ಚಿಕ್ಕಬಳ್ಳಾಪುರ___________ಸ್ಥಾಯಿ ಸಮಿತಿ ಸದಸ್ಯರ ಚುನಾವಣೆಗೆ

| ಕ್ರ.ಸಂ | ಸ್ಪರ್ಧಿಸಿರುವ ಅಭ್ಯರ್ಥಿಗಳ ಹೆಸರು | |
|---|---|---|
| 1 | | |
| 2 | | |
| 3 | | |
| 4 | | |
| 5 | | |
| 6 | | |
| 7 | | |
| 8 | | |
| 9 | | |
| 10 | | |

**ಗೊತ್ತುಪಡಿಸಿದ ಅಧಿಕಾರಿ**

---

**ನಮೂನೆ 3**

**(9ನೇ ವಿನಿಯಮ ನೋಡಿ)**

**(ಉಮೇದುವಾರಿಕೆಯನ್ನು ಹಿಂತೆಗೆದುಕೊಳ್ಳುವ ನೋಟಿಸು)**

ಜಿಲ್ಲಾ ಪಂಚಾಯಿತಿ ಚಿಕ್ಕಬಳ್ಳಾಪುರ_________ಸ್ಥಾಯಿ ಸಮಿತಿಯ ಸದಸ್ಯರ ಚುನಾವಣೆ.

**ಗೊತ್ತುಪಡಿಸಿದ ಅಧಿಕಾರಿಗೆ**

__________ಸ್ಥಾಯಿಸಮಿತಿಯ ಸದಸ್ಯರ ಚುನಾವಣೆಯಲ್ಲಿ ಕ್ರಮಬದ್ಧವಾಗಿ ನಾಂ ನಿರ್ದೇಶಿತನಾದ ಅಭ್ಯರ್ಥಿ______ಆದ ನಾನು ನನ್ನ ಉಮೇದುವಾರಿಕೆಯನ್ನು ಹಿಂದಕ್ಕೆ ತೆಗೆದುಕೊಳ್ಳುತ್ತೇನೆ ಎಂದು ನೋಟಿಸು ನೀಡುತ್ತೇನೆ.

ಸ್ಥಳ: ಚಿಕ್ಕಬಳ್ಳಾಪುರ

ದಿನಾಂಕ: **(ಅಭ್ಯರ್ಥಿ ಸಹಿ)**

ಈ ನೋಟಿಸನ್ನು _________ರಂದು _________ಗಂಟೆಗೆ ನನಗೆ ಒಪ್ಪಿಸಲಾಗಿದೆ.

**ಗೊತ್ತುಪಡಿಸಿದ ಅಧಿಕಾರಿಗೆ**

**ನೋಟಿಸ್ ಸ್ವೀಕೃತಿ**

**(ನೋಟೀಸನ್ನು ಒಪ್ಪಿಸುವ ವ್ಯಕ್ತಿಗೆ ನೀಡುವುದು)**

__________ಸ್ಥಾಯಿ ಸಮಿತಿಯ ಸದಸ್ಯನ ಉಮೇದುವಾರಿಕೆಯನ್ನು ಹಿಂತೆಗೆದುಕೊಳ್ಳುವ ನೋಟಿಸನ್ನು __________ ಇವರು __________ ದಿನಾಂಕದಂದು______ಗಂಟೆಗೆ ನನಗೆ ಒಪ್ಪಿಸಿದ್ದಾರೆ.

ಸ್ಥಳ: ಚಿಕ್ಕಬಳ್ಳಾಪುರ

ದಿನಾಂಕ: **ಗೊತ್ತುಪಡಿಸಿದ ಅಧಿಕಾರಿಗೆ**

**ಸೂಚನೆ:**

1. ಉಮೇದುವಾರಿಕೆಯನ್ನು ಹಿಂತೆಗೆದುಕೊಳ್ಳುವ ನೋಟಿಸನ್ನು ಒಪ್ಪಿಸುವುದಕ್ಕಾಗಿ ಅಭ್ಯರ್ಥಿಯು ಲಿಖಿತದಲ್ಲಿ ಪ್ರಾಧಿಕರಿಸಿದ ಅಭ್ಯರ್ಥಿಯ ಸೂಚಕ.

**ಪಕ್ಕ ಪ್ರತಿ (counter foil)**

ಮತಪತ್ರ ಕ್ರ.ಸಂ.__________

ಸದಸ್ಯನ ಹೆಸರು ಸಹಿ

---------------

**ನಮೂನೆ 4**

**ನಾಮಪತ್ರದ ನೋಟೀಸು**

ಜಿಲ್ಲಾ ಪಂಚಾಯಿತಿ, ಚಿಕ್ಕಬಳ್ಳಾಪುರ ------ಸ್ಥಾಯಿ ಸಮಿತಿ ಸದಸ್ಯರ ಚುನಾವಣೆ.

ಮೇಲ್ಕಂಡ ಚುನಾವಣೆಗೆ ಸಂಬಂಧಿಸಿದಂತೆ ನಾಟಪತ್ರಗಳನ್ನು ----- ದಿನಾಂಕದಂದು ------ ಗಂಟೆಯವರೆಗೆ ಸ್ವೀಕರಿಸಲಾಗಿದೆ.

| ನಾಮಪತ್ರದ ಕ್ರ. ಸಂ | ಅಭ್ಯರ್ಥಿಯ ಹೆಸರು | ವಿಳಾಸ |
|---|---|---|
| | | |
| | | |
| | | |

ಸ್ಥಳ: ಚಿಕ್ಕಬಳ್ಳಾಪುರ

ದಿನಾಂಕ: **ಗೊತ್ತುಪಡಿಸಿದ ಅಧಿಕಾರಿ**

----------

**ನಮೂನೆ 5**

**(ಕ್ರಮಬದ್ಧವಾಗಿ ನಾಮನಿರ್ದೇಶಿತವಾದ ಅಭ್ಯರ್ಥಿಯ ಪಟ್ಟಿ)**

ಜಿಲ್ಲಾ ಪಂಚಾಯಿತಿ, ಚಿಕ್ಕಬಳ್ಳಾಪುರ ------ಸ್ಥಾಯಿ ಸಮಿತಿ ಸದಸ್ಯರ ಚುನಾವಣೆ.

| ಕ್ರ. ಸಂ | ಅಭ್ಯರ್ಥಿಯ ಹೆಸರು | ಅಭ್ಯರ್ಥಿಯ ವಿಳಾಸ |
|---|---|---|
| | | |
| | | |
| | | |

ಸ್ಥಳ: ಚಿಕ್ಕಬಳ್ಳಾಪುರ

ದಿನಾಂಕ: **ಗೊತ್ತುಪಡಿಸಿದ ಅಧಿಕಾರಿ**

-------------

**ನಮೂನೆ 6**

**ಉಮೇದುವರಿಕೆಯನ್ನು ಹಿಂತೆಗೆದುಕೊಳ್ಳುವ ನೋಟೀಸು**

ಜಿಲ್ಲಾ ಪಂಚಾಯಿತಿ, ಚಿಕ್ಕಬಳ್ಳಾಪುರ ----- ಸ್ಥಾಯಿ ಸಮಿತಿ ಸದಸ್ಯರ ಚುನಾವಣೆ.

ಮೇಲ್ಕಂಡ ಚುನಾವಣೆಯಲ್ಲಿ ಈ ಅಭ್ಯರ್ಥಿ/ಅಭ್ಯರ್ಥಿಗಳು ತನ್ನ ಉಮೇದುವರಿಕೆ/ಉಮೇದುವಾರಿಕೆಗಳನ್ನು ಈ -------ದಿನಾಂಕದಂದು ತೆಗೆದುಕೊಂಡಿದ್ದಾರೆಂದು ಈ ಮೂಲಕ ನೋಟೀಸು ನೀಡಲಾಗಿದೆ.

ಸ್ಥಳ: ಚಿಕ್ಕಬಳ್ಳಾಪುರ **ಗೊತ್ತುಪಡಿಸಿದ ಅಧಿಕಾರಿ**

ದಿನಾಂಕ:

-------------

**ನಮೂನೆ 7**

**ಸ್ಪರ್ಧಿಸುವ ಅಭ್ಯರ್ಥಿಗಳ ಪಟ್ಟಿ**

ಜಿಲ್ಲಾ ಪಂಚಾಯಿತಿ, ಚಿಕ್ಕಬಳ್ಳಾಪುರ ------ ಸ್ಥಾಯಿ ಸಮಿತಿ ಸದಸ್ಯರ ಚುನಾವಣೆ.

| ಕ್ರ ಸಂ | ಅಭ್ಯರ್ಥಿಯ ಹೆಸರು | ಅಭ್ಯರ್ಥಿಯ ವಿಳಾಸ |
|---|---|---|
| | | |

ಸ್ಥಳ: ಚಿಕ್ಕಬಳ್ಳಾಪುರ

ದಿನಾಂಕ: **ಗೊತ್ತುಪಡಿಸಿದ ಅಧಿಕಾರಿ**

----------

**ನಮೂನೆ 8**

**ಮತ ಎಣಿಕೆ ಫಲಿತಾಂಶ**

ಜಿಲ್ಲಾ ಪಂಚಾಯಿತಿ, ಚಿಕ್ಕಬಳ್ಳಾಪುರ -------- ಸ್ಥಾಯಿ ಸಮಿತಿ ಸದಸ್ಯರ ಚುನಾವಣೆ.

| ಕ್ರ ಸಂ | ಅಭ್ಯರ್ಥಿಯ ಹೆಸರು | ಚಲಾಯಿಸಿದ ಕ್ರಮಬದ್ಧ ಮತಗಳ ಸಂಖ್ಯೆ |
|---|---|---|
| 1 | | |
| 2 | | |
| 3 | | |
| 4 | | |
| 5 | | |
| 6 | | |

| ಒಟ್ಟು | ತಿರಸ್ಕೃತ ಮತಗಳು |
|---|---|
| | |

ಸ್ಥಳ: ಚಿಕ್ಕಬಳ್ಳಾಪುರ

ದಿನಾಂಕ: **ಗೊತ್ತುಪಡಿಸಿದ ಅಧಿಕಾರಿ**

**PD.20** ಮುಖ್ಯ ಯೋಜನಾಧಿಕಾರಿ

**SC.1** ಜಿಲ್ಲಾ ಪಂಚಾಯತ್, ಚಿಕ್ಕಬಳ್ಳಾಪುರ

## ಮುಖ್ಯ ಯೋಜನಾಧಿಕಾರಿ ಜಿಲ್ಲಾ ಪಂಚಾಯತ್, ಚಿಕ್ಕಬಳ್ಳಾಪುರ

**ಸಂಖ್ಯೆ:ಜಿಪಂಚಿ/ಯೋಶಾಖೆ/ಸ್ಥಾಯಿಸ/ಚುನಾವ/ವಿನಿಯಮ/2013-14 ದಿನಾಂಕ: 07.02.2014**

### ಚಿಕ್ಕಬಳ್ಳಾಪುರ, ಜಿಲ್ಲಾ ಪಂಚಾಯಿತಿ

### ಸ್ಥಾಯಿ ಸಮಿತಿಗಳ ವಿನಿಯಮಗಳು, 2013

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ರ ಪ್ರಕರಣಗಳು 188(1) ಮತ್ತು 313ರ ಪ್ರಕರಣಗಳಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರದ ಪತ್ರ ಸಂಖ್ಯೆ:ಗ್ರಾಅಪ/188/ಜಿಪಸ/2013, ದಿನಾಂಕ:10/12/2013ರಡಿ ಅನುಮತಿ ಪಡೆದು ಚಿಕ್ಕಬಳ್ಳಾಪುರ ಜಿಲ್ಲಾ ಪಂಚಾಯತ್ ಈ ಕೆಳಗಿನ ವಿನಿಯಮಗಳನ್ನು ರಚಿಸುತ್ತದೆ.

**(1) ಸಂಕ್ಷಿಪ್ತ ಶೀರ್ಷಿಕೆ ಮತ್ತು ಪ್ರಾರಂಭ:-**

1) ಈ ವಿನಿಯಮಗಳನ್ನು ಚಿಕ್ಕಬಳ್ಳಾಪುರ ಜಿಲ್ಲಾ ಪಂಚಾಯತ್ ಸ್ಥಾಯಿ ಸಮಿತಿಗಳ ವಿನಿಯಮಗಳು, 2013 ಎಂದು ಕರೆಯತಕ್ಕದ್ದು.

2) ಈ ವಿನಿಯಮಗಳು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**(2) ಸ್ಥಾಯಿ ಸಮಿತಿಗಳು:-** ಜಿಲ್ಲಾ ಪಂಚಾಯಿತಿಯು ಈ ಕೆಳಗೆ ಕಾಣಿಸಿರುವ ಐದು ಸ್ಥಾಯಿ ಸಮಿತಿಗಳನ್ನು ಹೊಂದಿರತಕ್ಕದ್ದು.

1) ಸಾಮಾನ್ಯ ಸ್ಥಾಯಿ ಸಮಿತಿ;

2) ಹಣಕಾಸು, ಲೆಕ್ಕಪರಿಶೋಧನೆ ಮತ್ತು ಯೋಜನಾ ಸ್ಥಾಯಿ ಸಮಿತಿ;

3) ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿ;

4) ಶಿಕ್ಷಣ ಮತ್ತು ಆರೋಗ್ಯ ಸ್ಥಾಯಿ ಸಮಿತಿ;

5) ಕೃಷಿ ಮತ್ತು ಕೈಗಾರಿಕಾ ಸ್ಥಾಯಿ ಸಮಿತಿ;

**(3) ಸ್ಥಾಯಿ ಸಮಿತಿ ಅಧ್ಯಕ್ಷರು:-** ಜಿಲ್ಲಾ ಪಂಚಾಯಿತಿಯ ಸದಸ್ಯರುಗಳಿಂದ ಚುನಾಯಿತರಾಗುವ ಅಧ್ಯಕ್ಷರು ಸೇರಿದಂತೆ ಪ್ರತಿಯೊಂದು ಸ್ಥಾಯಿ ಸಮಿತಿಯೂ ಏಳು ಜನ ಹೆಚ್ಚಿಲ್ಲದಷ್ಟು ಸಂಖ್ಯೆಯ ಸದಸ್ಯರನ್ನು ಒಳಗೊಂಡಿರತಕ್ಕದ್ದು. ಜಿಲ್ಲಾ ಪಂಚಾಯತ್ ಅಧ್ಯಕ್ಷರು ಹಣಕಾಸು, ಲೆಕ್ಕ ಪರಿಶೋಧನಾ ಮತ್ತು ಯೋಜನಾ ಸ್ಥಾಯಿ ಸಮಿತಿ ಪದನಿಮಿತ್ತ ಸದಸ್ಯರು ಮತ್ತು ಅಧ್ಯಕ್ಷರಾಗಿರುತ್ತಾರೆ. ಮತ್ತು ಜಿಲ್ಲಾ ಪಂಚಾಯತ್ ಉಪಾಧ್ಯಕ್ಷರು ಸಾಮಾನ್ಯ ಸ್ಥಾಯಿ ಸಮಿತಿಯ ಪದನಿಮಿತ್ತ ಸದಸ್ಯ ಮತ್ತು ಅಧ್ಯಕ್ಷರಾಗಿರುತ್ತಾರೆ. ಇತರೆ ಮೂರು ಸಮಿತಿಗಳು ತಮ್ಮ ಸದಸ್ಯರುಗಳಿಂದ ಅಧ್ಯಕ್ಷರನ್ನು ಚುನಾಯಿಸಿಕೊಳ್ಳುತ್ತವೆ. ಆದರೆ, ಸಾಮಾಜಿಕ ನ್ಯಾಯ ಸಮಿತಿ ಕನಿಷ್ಠ ಪಕ್ಷ ಒಬ್ಬ ಮಹಿಳಾ ಸದಸ್ಯರನ್ನು ಹಾಗೂ ಅನುಸೂಚಿತ ಜಾತಿ ಅಥವಾ ಅನುಸೂಚಿತ ಪಂಗಡಗಳಿಗೆ ಸೇರಿದ ಒಬ್ಬ ಸದಸ್ಯರನ್ನು ಹೊಂದಿರತಕ್ಕದ್ದು. ಯಾವುದೇ ಒಬ್ಬ ಸದಸ್ಯನು ಎರಡಕ್ಕಿಂತಲೂ ಹೆಚ್ಚು ಸ್ಥಾಯಿ ಸಮಿತಿಗಳ ಸದಸ್ಯನಾಗಿ ಸೇವೆ ಸಲ್ಲಿಸತಕ್ಕದ್ದಲ್ಲ.

**(4) ಪದನಿಮಿತ್ತ ಕಾರ್ಯದರ್ಶಿ:-** ಎ) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಸಾಮಾನ್ಯ ಸ್ಥಾಯಿ ಸಮಿತಿಯ ಪದನಿಮಿತ್ತ ಕಾರ್ಯದರ್ಶಿ ಆಗಿರುತ್ತಾರೆ. ಹಾಗೂ ಉಪ ಕಾರ್ಯದರ್ಶಿ, ಮುಖ್ಯ ಲೆಕ್ಕಾಧಿಕಾರಿ (ಮುಖ್ಯ ಯೋಜನಾಧಿಕಾರಿ) ಮತ್ತು ಯೋಜನಾನಿರ್ದೇಶಕರು(ಡಿ.ಆರ್.ಡಿ.ಎ ಕೋಶ) ಇವರನ್ನು ಉಳಿದ ಪ್ರತಿಯೊಂದು ಸ್ಥಾಯಿ ಸಮಿತಿಗಳಿಗೆ ಪದನಿಮಿತ್ತ ಕಾರ್ಯದರ್ಶಿಯಾಗಿ ನಾಮ ನಿರ್ದೇಶನ ಮಾಡುತ್ತಾರೆ.

1) ಹಾಗೂ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯು ಯಾವುದೇ ಸ್ಥಾಯಿ ಸಮಿತಿ ಸಭೆಗೆ ಹಾಜರಾಗಲು ಮತ್ತು ಚರ್ಚೆಯಲ್ಲಿ ಭಾಗವಹಿಸಲು ಹಕ್ಕನ್ನು ಹೊಂದಿರತಕ್ಕದ್ದು ಆದರೆ ಯಾವುದೇ ನಿರ್ಣಯವನ್ನು ಮಂಡಿಸಲು ಅಥವಾ ಮತ ಚಲಾಯಿಸಲು ಹಕ್ಕನ್ನು ಹೊಂದಿರತಕ್ಕದ್ದಲ್ಲ.

2) ಯಾವುದೇ ಸಮಿತಿಯ ಮುಂದಿರುವ ಯಾವುದೇ ಪ್ರಸ್ತಾವ ಅಥವಾ ನಿರ್ಣಯ ಅಥವಾ ಅಧ್ಯಕ್ಷನ ಯಾವುದೇ ಆದೇಶವು ಈ ವಿನಿಯಮದ ಅಥವಾ ಇತರ ಯಾವುದೇ ಕಾನೂನಿನ ಉಪಬಂಧದ ಅಥವಾ ಅದರ ಅಡಿ ಮಾಡಲಾದ ಯಾವುದೇ ನಿಯಮದ ಅಥವಾ ಆದೇಶ ಅಥವಾ ಯಾವುದೇ ಆರ್ಥಿಕ ವಿನಿಯಮ ಅಥವಾ ಬಜೆಟ್ ಏರ್ಪಾಡು ಉಲ್ಲಂಘಿಸಿರುವುದಾದರೆ ಅಥವಾ ಅವುಗಳಿಗೆ ಅಸಂಗತವಾಗಿದೆ ಎಂದು ಯಾವುದೇ ಸ್ಥಾಯಿ ಸಮಿತಿಯ ಅಥವಾ ಅಧ್ಯಕ್ಷನ ಪ್ರಕಾರ್ಯಗಳು ಅಥವಾ ಅಧಿಕಾರಗಳನ್ನು ನ್ಯೂನ್ಯಗೊಳಿಸುವುದೆಂದು ಆಯಾ ಸಮಿತಿ ಪದನಿಮಿತ್ತ ಕಾರ್ಯದರ್ಶಿಗಳು ಅಭಿಪ್ರಾಯಬಿಟ್ಟರೆ ತನ್ನ ಅಭಿಪ್ರಾಯಕ್ಕೆ ಕಾರಣಗಳನ್ನು ಒಳಗೊಂಡಿರುವ ಹಾಗೂ ಪ್ರಸ್ತಾವ ಅಥವಾ ಆದೇಶವು ಯಾವ ಕಾನೂನು ನಿಯಮ, ಆದೇಶ ವಿನಿಯಮ ಅಥವಾ ಏರ್ಪಾಡಿಗೆ ಅಸಂಗತವಾಗಿದೆ ಎಂಬುದನ್ನು ಸೂಚಿಸಿ ಲಿಖಿತ ಟಿಪ್ಪಣಿ ಮೂಲಕ ಸಮಿತಿಗೆ ಅಥವಾ ಅಧ್ಯಕ್ಷರಿಗೆ ಸಲಹೆ ನೀಡುವುದು, ಆಯಾ ಪದನಿಮಿತ್ತ ಕಾರ್ಯದರ್ಶಿ ಕರ್ತವ್ಯವಾಗಿರತಕ್ಕದ್ದು.

3) ಜಿಲ್ಲಾ ಪಂಚಾಯಿತಿ ಸ್ಥಾಯಿ ಸಮಿತಿಗಳು ಅಥವಾ ಸ್ಥಾಯಿ ಸಮಿತಿ ಅಧ್ಯಕ್ಷನು (ಎ) (2) ನೇ ಖಂಡದಲ್ಲಿ ಉಲ್ಲೇಖಿಸಲಾದ ಅಸಂಗತೆಯನ್ನು ಪರಿಹರಿಸದೇ ಅಥವಾ ನಿರ್ಣಯ ಅಥವಾ ಆದೇಶವನ್ನು ಅಂಗೀಕರಿಸಿದರೆ ಈ ವಿನಿಮಯದ ಯಾವುದೇ ಇತರ ಉಪಬಂಧಗಳಲ್ಲಿ ಏನೇ ಇದ್ದರೂ ಸದರಿ ನಿರ್ಣಯ ಅಥವಾ ಆದೇಶದ ಒಂದು ಪ್ರತಿಯನ್ನು ತನ್ನ ಲಿಖಿತ ಟಿಪ್ಪಣಿಯೊಂದಿಗೆ ಸ್ಥಾಯಿ ಸಮಿತಿ ಅಧ್ಯಕ್ಷನಿಗೆ ತಿಳಿಸಿ ಸರ್ಕಾರಕ್ಕೆ ಕಳುಹಿಸುವುದು ಆಯಾ ಪದನಿಮಿತ್ತ ಕಾರ್ಯದರ್ಶಿಯ ಕರ್ತವ್ಯವಾಗಿರತಕ್ಕದ್ದು ಮತ್ತು ಸರ್ಕಾರದ ತೀರ್ಮಾನದ ಮೇಲಲ್ಲದೆ ಅನ್ಯತಾ ಅಂತ ನಿರ್ಣಯ ಅಥವಾ ಆದೇಶವನ್ನು ಮಂಡಿಸತಕ್ಕದ್ದಲ್ಲ.

ಪರಂತು ಸರ್ಕಾರವು ಅಂತ ಪತ್ರವನ್ನು ಸ್ವೀಕರಿಸಿದ ದಿನಾಂಕದಿಂದ 15 ದಿನಗಳ ಒಳಗೆ ತನ್ನ ತೀರ್ಮಾನವನ್ನು ತಿಳಿಸದಿದ್ದರೆ, ಆಯಾ ಪದನಿಮಿತ್ತ ಕಾರ್ಯದರ್ಶಿ, ಜಿಲ್ಲಾ ಪಂಚಾಯಿತಿ ಸಮಿತಿಯ ನಿರ್ಣಯ ಅಥವಾ ಅಧ್ಯಕ್ಷನ ಆದೇಶವನ್ನು ಅನುಷ್ಠಾನಗೊಳಿಸಲು ಕ್ರಮ ಕೈಗೊಳ್ಳತಕ್ಕದ್ದು.

4) ಮುಖ್ಯ ಲೆಕ್ಕಾಧಿಕಾರಿಯು ಹಣಕಾಸಿನ ವಿಷಯದಲ್ಲಿ ಸ್ಥಾಯಿ ಸಮಿತಿಗಳಿಗೆ ಸಲಹೆ ನೀಡತಕ್ಕದ್ದು ಮತ್ತು ವಾರ್ಷಿಕ ಲೆಕ್ಕಪತ್ರಗಳನ್ನು ಮತ್ತು ಬಜೆಟ್‌ನ್ನು ಸಿದ್ಧಪಡಿಸುವುದನ್ನು ಸೇರಿದಂತೆ ಎಲ್ಲಾ ವಿಷಯಗಳ ಬಗ್ಗೆ ಹೊಣೆಗಾರರನಾಗಿರತಕ್ಕದ್ದು.

5) ಮುಖ್ಯ ಲೆಕ್ಕಾಧಿಕಾರಿಯು ಸೂಕ್ತ ಮಂಜೂರಾತಿ ಹೊರತು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ ಮತ್ತು ಅದರ ಅಡಿಯ ನಿಯಮಗಳು ಹಾಗೂ ನಿಯಮಗಳಿಗೆ ಅನುಸಾರವಾಗಿಲ್ಲದೆ ಯಾವುದೇ ವೆಚ್ಚವನ್ನು ವಹಿಸಿಲ್ಲವೆಂದು ಖಚಿತಪಡಿಸಿಕೊಳ್ಳತಕ್ಕದ್ದು ಅಥವಾ ಅಧಿನಿಯಮದ ಹಾಗೂ ನಿಯಮಗಳ ಅಥವಾ ವಿನಿಮಯಗಳ ಸಮರ್ಥಿಸಿಲ್ಲದೆ ಅಥವಾ ಬಜೆಟ್‌ನಲ್ಲಿ ಯಾವುದೇ ಏರ್ಪಾಡು ಮಾಡಿಲ್ಲದಂತೆ ವೆಚ್ಚದ ಬಗ್ಗೆ ಅನುಮತಿ ನೀಡತಕ್ಕದ್ದಲ್ಲ.

ಬಿ) ಸ್ಥಾಯಿ ಸಮಿತಿಯ ವ್ಯವಹಾರಗಳು ವಿನಿಮಯಗಳ ಪ್ರಕಾರ ನಡೆಯುವುದನ್ನು ಹಾಗೂ ಸಮಂಜಸವಾದ ಕಾರ್ಯವಿಧಾನವನ್ನು ಪಾಲಿಸಲಾಗುತ್ತಿದೆ ಎಂಬುದನ್ನು ಸುನಿಶ್ಚಿತಗೊಳಿಸಿಕೊಳ್ಳುವುದು ಸ್ಥಾಯಿ ಸಮಿತಿಯ ಪದನಿಮಿತ್ತ ಕಾರ್ಯದರ್ಶಿಯ ಹೊಣೆಗಾರಿಕೆಯಾಗಿರುತ್ತದೆ. ಸ್ಥಾಯಿ ಸಮಿತಿಯ ಮುಂದೆ ಇಡಬೇಕೆಂದು ಪ್ರಸ್ತಾಪಿಸಲಾಗಿರುವ ಹಣಕಾಸಿನ ಪರಿಣಾಮವನ್ನು ಹೊಂದಿರುವ ಅಥವಾ ನೀತಿ ನಿರ್ಣಯಗಳಿಗೆ ಸಂಬಂಧಿಸಿದ ಯಾವುದೇ ವಿಷಯವನ್ನು ಸ್ಥಾಯಿ ಸಮಿತಿಯ ಸಭೆಯ ಕಾರ್ಯಸೂಚಿಯಲ್ಲಿನ ವಿಷಯವಾಗಿ ಸೇರಿಸುವುದಕ್ಕೆ ಮೊದಲು ಆ ಸಮಿತಿಯ ಪದನಿಮಿತ್ತ ಕಾರ್ಯದರ್ಶಿ ಆ ವಿಷಯವನ್ನು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳ ಗಮನಕ್ಕೆ ತರತಕ್ಕದ್ದು.

**5. ಸಭೆಗಳನ್ನು ನಡೆಸುವುದು :–** 1) ಸ್ಥಾಯಿ ಸಮಿತಿಯ ಸಭೆಯನ್ನು ಪ್ರತಿ ಮೂರು ತಿಂಗಳಿಗೊಮ್ಮೆ ನಡೆಸತಕ್ಕದ್ದು ಹಾಗೂ ಜಿಲ್ಲಾ ಪಂಚಾಯಿತಿಯ ಸಾಮಾನ್ಯ ಸಭೆ ಜರುಗುವ ಪೂರ್ವ ಹದಿನೈದು ದಿನ ಮುಂಚಿತ ಸ್ಥಾಯಿ ಸಮಿತಿಗಳು ಜರಗುವಂತೆ ನೋಡಿಕೊಳ್ಳತಕ್ಕದ್ದು. ಆದರೆ ಅಧ್ಯಕ್ಷರು ಅವಶ್ಯವೆಂದು ಭಾವಿಸಿದರೆ ಹಾಗೂ ಕನಿಷ್ಠ ಪಕ್ಷ 3 ಸದಸ್ಯರು ಲಿಖಿತ ಕೋರಿಕೆಯನ್ನು ಸಲ್ಲಿಸಿದ ಎಲ್ಲಾ ಸಂದರ್ಭದಲ್ಲಿ ಸಭೆಯನ್ನು ಸಮಾವೇಶಗೊಳಿಸಲು ಅಧ್ಯಕ್ಷರು ಅಧಿಕಾರ ಹೊಂದಿರತಕ್ಕದ್ದು.

ಎ) ಸ್ಥಾಯಿ ಸಮಿತಿಯ ವ್ಯವಹಾರವನ್ನು ನಡೆಸುವುದಕ್ಕೆ ಸಮಿತಿಯ ಒಟ್ಟು ಸದಸ್ಯರ ಅರ್ಧದಷ್ಟು ಸಂಖ್ಯೆಯನ್ನು ಕೋರಂಗೆ ಅವಶ್ಯವೆಂದು ಪರಿಗಣಿಸತಕ್ಕದ್ದು.

ಬಿ) ಸಭೆ ಆರಂಭವಾಗುವ ಹೊತ್ತಿಗೆ ಅಗತ್ಯ ಸಂಖ್ಯೆಯ ಸದಸ್ಯರ ಕೋರಂ ಇಲ್ಲದಿದ್ದರೆ ಅಧ್ಯಕ್ಷರು 30 ನಿಮಿಷಗಳವರೆಗೆ ಕಾಯತಕ್ಕದ್ದು ಹಾಗೂ ಕೋರಂ ಲಭಿಸಿದರೆ ಸಭೆಯನ್ನು ಮುಂದುವರೆಸತಕ್ಕದ್ದು, ಆ ಅವಧಿಯ ಒಳಗಾಗಿ ಕೋರಂ ಲಭಿಸದೇ ಹೋದರೆ ಅಧ್ಯಕ್ಷರು ಸಭೆಯನ್ನು ಮುಂದೂಡಬಹುದು.

ಸಿ) **ಗೈರುಹಾಜರಿಗೆ ಅನುಮತಿ :** ಯಾವುನೇ ಸದಸ್ಯರು 3 ಕ್ಕಿಂತ ಹೆಚ್ಚು ಸ್ಥಾಯಿ ಸಮಿತಿಗೆ ಗೈರು ಹಾಜರು ಇರತಕ್ಕದ್ದಲ್ಲ ಅನುಮತಿ ಇಲ್ಲದೆ 3 ಕ್ಕಿಂತಲೂ ಹೆಚ್ಚು ನಿರಂತರ ಸಭೆಗಳಿಗೆ ಗೈರುಹಾಜರು ಉಳಿದಲ್ಲಿ ಅವರು ಸಂದರ್ಭಾನುಸಾರ ಅವರ ಸ್ಥಾನವು ಖಾಲಿಯಾಗಿರುವುದಾಗಿ ಅಥವಾ ಖಾಲಿಯಾಗಿದೆ ಎಂದು ಭಾವಿಸತಕ್ಕದ್ದು.

ಡಿ) ಸರ್ಕಾರಿ ಅಧಿಕಾರಿಗಳ ಹಾಜರಾತಿ : ಆಯಾ ಸ್ಥಾಯಿ ಸಮಿತಿಯ ಸಭೆಗಳಿಗೆ ಅಯಾ ಇಲಾಖೆಯ ಜಿಲ್ಲಾ ಮಟ್ಟದ ಅಧಿಕಾರಿಗಳು ಹಾಜರಿರುವಂತೆ ಕೋರಬಹುದಾಗಿದೆ.

ಇ) ಸಭೆಯ ಕಾರ್ಯಸೂಚಿಯಲ್ಲಿ ಸೇರಿಸಲಾಗಿದ್ದ ಹೊರತು ಬೇರಾವುದೇ ಪ್ರಸ್ತಾವನೆಯನ್ನು ರಚಿಸತಕ್ಕದ್ದಲ್ಲ. ಕಾರ್ಯಸೂಚಿಯಲ್ಲಿನ ವಿಷಯಗಳಲ್ಲಿ ಸಂಬಂಧಿಸಿರುವಂತೆ ಅಥವಾ ಪ್ರಸಂಗಿಕವಾಗಿರುವ ಯಾವುದೇ ಗೊತ್ತುವಳಿಯನ್ನು ಸದಸ್ಯರು ಪ್ರಸ್ತಾಪಿಸಬಹುದು. ಕಾರ್ಯಸೂಚಿಯಲ್ಲಿ ಸೇರಿದಂತೆ ಯಾವುದೇ ಜರೂರು ವಿಷಯವನ್ನು ಅಧ್ಯಕ್ಷ ಪ್ರಸ್ತಾಪಿಸಬಹುದು.

2) ಬಹುಮತದ ಆಧಾರದ ಮೇಲೆ ಎಲ್ಲಾ ತೀರ್ಮಾನಗಳನ್ನು ಕೈಗೊಳ್ಳತಕ್ಕದ್ದು, ಸಮಾನ ಮತಗಳು ಬಂದ ಸಂದರ್ಭದಲ್ಲಿ ಅಧ್ಯಕ್ಷರು ನಿರ್ಣಯದ ಮತ ಚಲಾಯಿಸತಕ್ಕದ್ದು.

ಎ) ಸಮಿತಿಯ ಕಾರ್ಯದರ್ಶಿಯು ಸಭೆಯ ನಡವಳಿಕೆಗಳನ್ನು ನಡುವಳಿಕೆ ಪುಸ್ತಕದಲ್ಲಿ ದಾಖಲಿಸತಕ್ಕದ್ದು. ಅದಕ್ಕೆ ಅಧ್ಯಕ್ಷರು ಸಹಿ ಹಾಕತಕ್ಕದ್ದು ಮತ್ತು ಜಿಲ್ಲಾ ಪಂಚಾಯಿತಿಯ ಮುಂದಿನ ಸಭೆಯಲ್ಲಿ ಸ್ಥಾಯಿ ಸಮಿತಿ ಸಭೆಯ ನಡುವಳಿಕೆಗಳನ್ನು ಮಂಡಿಸತಕ್ಕದ್ದು.

ಬಿ) ಜಿಲ್ಲಾ ಪಂಚಾಯಿತಿಯು ಸಮಿತಿಗಳ ಯಾವುದೇ ತೀರ್ಮಾನಗಳನ್ನು ಅನೂರ್ಜಿತಗೊಳಿಸಲು, ಪುನರ್ ವೀಕ್ಷಿಸಲು, ಮಾರ್ಪಾಡು ಮಾಡಲು ಅಧಿಕಾರ ಹೊಂದಿರತಕ್ಕದ್ದು.

**6. ಸಮಿತಿಯ ಪ್ರಕಾರ್ಯಗಳು ಮತ್ತು ಅಧಿಕಾರಗಳು :–** 1) ಪ್ರತಿಯೊಂದು ಸ್ಥಾಯಿ ಸಮಿತಿಯ ಪ್ರಕಾರ್ಯಗಳೇನು ಎಂಬುದನ್ನು 181ನೇ ಪ್ರಕರಣದಲ್ಲಿ ವಿವರಿಸಿದಂತೆ ಜಿಲ್ಲಾ ಪಂಚಾಯಿತಿಯಿಂದ ಅವುಗಳಿಗೆ ನಿಯೋಜಿಸಲಾದ ಅಧಿಕಾರ ಅಷ್ಟರ ಮಟ್ಟಿಗೆ ಸ್ಥಾಯಿ ಸಮಿತಿಗಳು ತಮ್ಮ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



2) ಸ್ಥಾಯಿ ಸಮಿತಿ ಸದಸ್ಯರು ಸ್ಥಾಯಿ ಸಮಿತಿ ಸಭೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ, ಯೋಜನೆಗಳು ಅರ್ಥಪೂರ್ಣವಾಗಿ ಅನುಷ್ಠಾನಗೊಳಿಸಲು ಸಹಾಯ/ಸಹಕಾರ ನೀಡತಕ್ಕದ್ದು.

3) ಅನುದಾನ ಮಿತಿಗೊಳಪಟ್ಟು ಮಂಜೂರಾತಿಯನ್ನು ನೀಡುವುದು ಫಲಾನುಭವಿಗಳ ಆಯ್ಕೆ, ಕಾಮಗಾರಿಗಳ ಆಯ್ಕೆ, ಸ್ಥಳಗಳನ್ನು ನಿರ್ಧರಿಸುವಾಗ ಅವುಗಳ ಅವಶ್ಯಕತೆ ಹಾಗೂ ಅಧ್ಯತೆಯ ಆಧಾರದ ಮೇಲೆ ಅವುಗಳನ್ನು ಆಯ್ಕೆ ಮಾಡುವುದು ಮಾರ್ಗಸೂಚಿ ಪ್ರಕಾರ ಸರಿಯಾದ ಪ್ರಸ್ತಾವನೆಗಳಿವೆಯೇ ಎಂಬ ಬಗ್ಗೆ ಕೂಲಂಕುಶವಾಗಿ ಪರಿಶೀಲಿಸಿದ ನಂತರವೇ ಅವುಗಳಿಗೆ ಅನುಮೋದನೆ ನೀಡತಕ್ಕದ್ದು.

4) ಸ್ಥಾಯಿ ಸಮಿತಿ ಸಭೆಗಳಲ್ಲಿ ಪ್ರತಿಯೊಂದು ಕಾರ್ಯಕ್ರಮದ ಪ್ರಗತಿ ಪರಿಶೀಲನೆ ಮಾಡಿ ನಿಗಧಿತ ಗುರಿಯನ್ನು ನಿಗಧಿತ ಸಮಯದಲ್ಲಿ ನಿರ್ವಹಿಸಲು ಸಲಹೆಗಳನ್ನು ನೀಡತಕ್ಕದ್ದು.

5) ಕಾರ್ಯಕ್ರಮಗಳ ಯಶಸ್ವಿ ಅನುಷ್ಠಾನಕ್ಕೆ ಒತ್ತು ನೀಡುವುದು ಕಾರ್ಯಕ್ರಮಗಳ ಅನುಷ್ಠಾನ ಪರಿಶೀಲನೆಗಾಗಿ ವರ್ಷದಲ್ಲಿ ನಾಲ್ಕು ತಿಂಗಳಿಗೊಮ್ಮೆ ಸ್ಥಾಯಿ ಸಮಿತಿಯು ತಮಗೆ ಸಂಬಂಧಪಟ್ಟ ಇಲಾಖಾ ಕಾರ್ಯಕ್ರಮಗಳ ಪರಿಶೀಲನೆಗಾಗಿ ಭೇಟಿ ನೀಡತಕ್ಕದ್ದು. ಫಲಾನುಭವಿಗಳು ಪಡೆದುಕೊಂಡ ಪ್ರಯೋಜನಗಳ ತಪಾಸಣೆ, ಕಾರ್ಯಕ್ರಮಗಳ ತಪಾಸಣೆ, ಶಾಲೆ ಹಾಗೂ ವಿದ್ಯಾರ್ಥಿನಿಲಯಗಳ ತಪಾಸಣೆ ಆಯಾ ಸ್ಥಾಯಿ ಸಮಿತಿಯಿಂದ ಕೈಗೊಂಡು ವರದಿಯನ್ನು ಜಿಲ್ಲಾ ಪಂಚಾಯಿತಿಗೆ ನೀಡತಕ್ಕದ್ದು.

**PD.21** **ಮುಖ್ಯ ಯೋಜನಾಧಿಕಾರಿ**
**SC.1** **ಜಿಲ್ಲಾ ಪಂಚಾಯತ್, ಚಿಕ್ಕಬಳ್ಳಾಪುರ**

## ಕೃಷಿ ಮಾರಾಟ ಇಲಾಖೆ

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ. 16, 11ನೇ ರಾಜಭವನ ರಸ್ತೆ, ಪಿ.ಬಿ.ನಂ.5309, ಬೆಂಗಳೂರು.**

**ಸಂಖ್ಯೆ:ಕೃಮಾಇ:03:ಚುನಾವಣೆ:2014 ಬೆಂಗಳೂರು, ದಿನಾಂಕ:28-02-2014.**

### ಅಧಿಸೂಚನೆ

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 102 ಹಾಗೂ ನಿಯಮಾವಳಿಗಳು, 1968ರ ನಿಯಮ 88ಐರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕದಲ್ಲಿನ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾದ ಪಿ.ಎಸ್.ವಸ್ತ್ರದ ಆದ ನಾನು, ಚಿತ್ರದುರ್ಗ ಜಿಲ್ಲೆಯಿಂದ ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳಿಗೆ ಆಯ್ಕೆಯಾದ ಸದಸ್ಯರ ಹೆಸರನ್ನು ಈ ಕೆಳಕಂಡಂತೆ ಪ್ರಕಟಿಸಿರುತ್ತೇನೆ.

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಆಯ್ಕೆಯಾದ ಸದಸ್ಯರ ಹೆಸರು |
|---|---|---|
| 1 | ಚಿತ್ರದುರ್ಗ | ಶ್ರೀ ಹೆಚ್.ಡಿ. ರಂಗಯ್ಯ<br>ಅಧ್ಯಕ್ಷರು,<br>ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಹೊಳಲ್ಕೆರೆ. |

**ಪಿ.ಎಸ್. ವಸ್ತ್ರದ**
**PR.144** **ನಿರ್ದೇಶಕರು.**
**SC.75** **ಕೃಷಿ ಮಾರಾಟ ಇಲಾಖೆ**

## ಕೃಷಿ ಮಾರಾಟ ಇಲಾಖೆ

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ. 16, 11ನೇ ರಾಜಭವನ ರಸ್ತೆ, ಪಿ.ಬಿ.ನಂ.5309, ಬೆಂಗಳೂರು.**

**ಸಂಖ್ಯೆ:ಕೃಮಾಇ:03:ಚುನಾವಣೆ:2014 ಬೆಂಗಳೂರು, ದಿನಾಂಕ:01-03-2014.**

### ಅಧಿಸೂಚನೆ

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 102 ಹಾಗೂ ನಿಯಮಾವಳಿಗಳು, 1968ರ ನಿಯಮ 88ಐರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕದಲ್ಲಿನ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾದ ಪಿ.ಎಸ್.ವಸ್ತ್ರದ ಆದ ನಾನು, ಹಾಸನ ಜಿಲ್ಲೆಯಿಂದ ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳಿಗೆ ಆಯ್ಕೆಯಾದ ಸದಸ್ಯರ ಹೆಸರನ್ನು ಈ ಕೆಳಕಂಡಂತೆ ಪ್ರಕಟಿಸಿರುತ್ತೇನೆ.

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಆಯ್ಕೆಯಾದ ಸದಸ್ಯರ ಹೆಸರು |
|---|---|---|
| 1 | ಹಾಸನ | ಶ್ರೀ ಹೆಚ್.ಎ. ವೇಣುಗೋಪಾಲ್,<br>ಅಧ್ಯಕ್ಷರು,<br>ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಹಾಸನ. |

**ಪಿ.ಎಸ್. ವಸ್ತ್ರದ**
**PR.143** **ನಿರ್ದೇಶಕರು.**
**SC.75** **ಕೃಷಿ ಮಾರಾಟ ಇಲಾಖೆ**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು-59